# هداية الحيران

## فى مسألة الاستعانة بالجان

## ಜಿನ್ ಗಳ ಬಳಕೆಯ ಬಗ್ಗೆ ಗೊಂದಲಮಯ

# ಮಾರ್ಗದರ್ಶಣ

﴿بِسْمِ اللهِ الرَّحْمنِ الرَّحِيمِ﴾

# ಅಲ್ಲಾಹನ ನಾಮದಿಂದ

ಅವನು ದಯಾನಿಧಿಯೂ ಕರುಣಾಮಯನೂ ಆಗಿರುವನು

## مقدمة

## ಮೊದಲ ಮಾತು

إن الْحَمْدُ لِلَّهِ، نَحْمَدُهُ وَنَسْتَعِينُهُ وَنَسْتَغْفِرُهُ، وَنَعُوذُ بِاللَّهِ مِنْ شُرُورِ أَنْفُسِنَا، وَمِنْ سَيِّئَاتِ أَعْمَالِنَا، مَنْ يَهْدِهِ اللَّهُ فَلَا مُضِلَّ لَهُ، وَمَنْ يُضْلِلِ فَلَا هَادِيَ لَهُ، وَأَشْهَدُ أَنَّ لَا إِلَهَ إِلَّا اللَّهُ، وَحْدَهُ لَا شَرِيكَ لَهُ، وَأَشْهَدُ أن محمدًا عبده ورسوله..

﴿يَا أَيُّهَا الَّذِينَ آمَنُوا اتَّقُوا اللَّهَ حَقَّ تُقَاتِهِ وَلَا تَمُوتُنَّ إِلَّا وَأَنْتُمْ مُسْلِمُونَ﴾[1]

[1] ಸೂರಃ ಆಲು ಇಮ್ರಾನ್ ಸೂಕ್ತ:-102

﴿يَا أَيُّهَا النَّاسُ اتَّقُوا رَبَّكُمُ الَّذِي خَلَقَكُمْ مِنْ نَفْسٍ وَاحِدَةٍ وَخَلَقَ مِنْهَا زَوْجَهَا وَبَثَّ مِنْهُمَا رِجَالًا كَثِيرًا وَنِسَاءً وَاتَّقُوا اللَّهَ الَّذِي تَسَاءَلُونَ بِهِ وَالْأَرْحَامَ إِنَّ اللَّهَ كَانَ عَلَيْكُمْ رَقِيبًا﴾[2]

﴿يَا أَيُّهَا الَّذِينَ آمَنُوا اتَّقُوا اللَّهَ وَقُولُوا قَوْلًا سَدِيدًا يُصْلِحْ لَكُمْ أَعْمَالَكُمْ وَيَغْفِرْ لَكُمْ ذُنُوبَكُمْ وَمَنْ يُطِعِ اللَّهَ وَرَسُولَهُ فَقَدْ فَازَ فَوْزًا عَظِيمًا﴾[3]

"أَمَّا بَعْدُ فَإِنَّ أَصْدَقَ الْحَدِيثِ كِتَابُ اللَّهِ, وَإِنَّ أَفْضَلَ الْهَدْيِ هَدْيُ مُحَمَّدٍ, صَلَّى اللَّهُ عَلَيْهِ وَسَلَّمَ, وَشَرُّ الْأُمُورِ مُحْدَثَاتُهَا, وَكُلُّ بِدْعَةٍ ضَلَالَةٌ"

ಪ್ರಿಯ ಓದುಗರೇ. ಈ ಗ್ರಂಥವನ್ನು ಹೊರ ತರುವ ಒಂದು ಪ್ರಮುಖ ಉದ್ಧೇಶವನ್ನು ತಿಳಿಸುವುದು ಅತ್ಯಗತ್ಯವಾಗಿದೆ. ಏಕೆಂದರೆ ಇಂದು ನಮ್ಮ ಮದ್ಯೆ ಧಾರ್ಮಿಕಕ್ಕೆ ಸಂಬಂಧಪಟ್ಟ ಎಲ್ಲಾ ರೀತಿಯ ಪುಸ್ತಕಗಳು ಅದರಲ್ಲಿಯೂ ತೌಹೀದ್(ಏಕ ದೇವತ್ವ)ದ ಬಗ್ಗೆ ಸಾರುವ ಹಲವಾರು ಪುಸ್ತಕಗಳು ಆಡಿಯೋಗಳು ಮತ್ತು ವೀಡಿಯೋ ಸಿಡಿಗಳೂ ಹಲವಾರು ಭಾಷೆಗಳಲ್ಲಿ ಸುಲಭದಲ್ಲಿ ದೊರಕುತಿದ್ದು ಇನ್ನು ಈ ಒಂದು ಪುಸ್ತಕದ ಅವಶ್ಯಕತೆಯಾದರೂ ಏನಿದೆ?

---

[2] ಸೂರಃ ಅನ್ನಿಸಾಅ ಸೂಕ್ತ:–1

[3] ಸೂರಃ ಅಲ್ ಅಹ್ಝಾಬ್ ಸೂಕ್ತ: 70–71

ಅಲ್ಲಾಹನ ಏಕತೆಯನ್ನು ಪ್ರಬಲವಾಗಿ ಸಾರುವ ಅಲ್ಲಾಹನಲ್ಲದೇ ಯಾರೂ ಅರ್ಹರಲ್ಲ(ಲಾಇಲಾಹ ಇಲ್ಲಲ್ಲಾಹ್) ಎಂಬ ಧ್ಯೇಯ ವಾಕ್ಯದಡಿಯಲ್ಲಿ ಅದೆಷ್ಟೋ ಲೇಖನಗಳು ಪುಸ್ತಕಗಳೂ ಕೈಗೆಟುಕುವಷ್ಟು ಸಮೀಪದಲ್ಲಿದ್ದು ಇನ್ನು ಈ ಒಂದು ಪುಸ್ತಕವು ಹಾಸ್ಯಸ್ಪದವಾಗಿದೆ ಎಂದು ತೌಹೀದಿನ ಕೆಲವು ವಿರೋಧಿವಕ್ತಾರರು ಜನ ಸಮೂಹದ ಮಧ್ಯೆ ವಿಷಬೀಜವನ್ನು ಭಿತ್ತಲೂ ಬಹುದು.

ಮುಸ್ಲಿಮರ ಒಂದು ವಿಭಾಗವು ತಾವೇ ನೈಜ ಮುಸ್ಲಿಮರು ಎಂದು ಪ್ರತಿಪಾದಿಸುವರು. ನಾಲ್ಕು ಇಮಾಮರನ್ನು ಬಿಟ್ಟು ತಮ್ಮದೇ ಆದ ಒಂದು ಪಂಗಡವನ್ನು ಕಟ್ಟಿಕೊಂಡು ನಡೆಯುವರು. ಜುಮಾ ಖುತ್ಬಾವನ್ನು ಮಸೀದಿಯ ಮಿಂಬರಿನ ಮೇಲೆ ಹತ್ತಿ ಪ್ರವಾದಿ (ﷺ)ರವರು ನಿರ್ವಹಿಸಿದಂತಹ ಅರಬಿ ಭಾಷೆಯನ್ನು ಬಿಟ್ಟು ತಮ್ಮದೇ ಭಾಷೆಯಲ್ಲಿ ಖುತುಬಾವನ್ನು ನಿರ್ವಹಿಸುವ ಒಂದು ಹೊಸ ಮಸ್ಲಿಮರಲ್ಲವೆಂದೂ ಜನರ ಮಧ್ಯೆ ಒಂದು ಗೊಂದಲವನ್ನು ಸೃಷ್ಟಿಸಿ ಮುಸ್ಲಿಮ್ ಸಮೂಹವನ್ನು ದಾರಿಗೆಡಿಸುವುದನ್ನು ನಾವು ದಿನ ನಿತ್ಯ ಕಾಣುತ್ತೇವೆ.

ಮೇಲೆ ತೋರಿಸಿದ ವಿಷಯವು ಅಹ್ಲೇ ಸುನ್ನತ್‌ವಲ್ ಜಮಾಅತ್ ಎಂಬ ಹೆಸರಿನಲ್ಲಿ ಅರಿಯಲ್ಪಡುವ ಈ ಸಂಘಟನೆಯು ಸ್ಫೋಟಗೊಂಡು ಹಲವು ವಿಭಾಗಗಳಲ್ಲಿ ಹರಿಹಂಚಾಗಿ ಹೋಗಿರುವುದು ಒಂದು ವಾಸ್ತವವಾಗಿದೆ.

ಸೃಷ್ಟಿಕರ್ತನ ಏಕತೆಯ ಬಗ್ಗೆ ಪ್ರಬಲವಾಗಿ ಸಾರುವ ಮುಸ್ಲಿಮ್ ಸಮೂಹಗಳೆಡೆಯಲ್ಲಿ ನಡೆಯುವುದು ನವೀನಾಚಾರ, ಕಂದಾಚಾರ, ಅಂಧವಿಶ್ವಾಸ ಮತ್ತು ಬಹು ದೇವಾರಾಧನೆ ಹಾಗೂ ಮುಸ್ಲಿಮೇತರರ ಸಮೂಹದಲ್ಲಿಯೂ ಅನೇಕ ಅನಿಷ್ಟ ಪದ್ಧತಿಗಳು ಆಚರಣೆಯಲ್ಲಿರುವುದನ್ನು ವಿರೋಧಿಸುತ್ತಿರುವ ಏಕೈಕ ಸಂಘಟನೆಯಾಗಿದೆ ಸಲಫಿ ಸಂಘಟನೆ. ಇದರಲ್ಲಿಯೂ ಕೆಲವು ನಾಮಧಾರಿ ಪಂಡಿತರು ತಮ್ಮ ಅಧಿಕಾರ ಲಾಲಸೆಗಾಗಿ ದುರುದ್ದೇಶವನ್ನು ಸಫಲಗೊಳಿಸಲು ವಿಫಲ ಯತ್ನದಲ್ಲಿ ತೊಡಗಿದರು. ಇದರ

ಫಲವಾಗಿ ಸಂಘಟನೆಯಿಂದ ಕೆಲವು ನಾಮಧಾರಿ ಪಂಡಿತರನ್ನು ಹೊರದಬ್ಬಬೇಕಾದ ಅನಿರ್ವಾಯ ಪರಿಸ್ಥಿತಿಯು ಉಂಟಾಯಿತು.

ಹೊರ ದಬ್ಬಲ್ಪಟ್ಟ ಆ ಪುರೋಹಿತರು ತಮ್ಮ ಸಂಘಟನೆಯೇ ನೈಜ ಸಲಫಿ ಸಂಘಟನೆಯೆಂದೂ ತಾವೇ ನೈಜ ಸಲಫಿಗಳೆಂದೂ ಸಾರ ತೊಡಗಿದರು. ಇದು ಮಾತ್ರವಲ್ಲದೆ ಇವರು ತೌಹೀದಿನ ಬುಡಕ್ಕೆ ಕೊಡಲಿಯೇಟು ಇಡುವಂತಹ ಒಮದು ನವೀನ ಸಿದ್ಧಾಂತವನ್ನು ಜನರ ಮಧ್ಯೆ ಪ್ರಚಾರಪಡಿಸಲೂ ತೊಡಗಿದರು.

ಇಸ್ಲಾಮಿಗೆ ಅಪರಿಚಿತವಾಗಿದೆ ಜಿನ್ನ್ ವಾದ. ಇದನ್ನು ವಿರೋಧಿಸುವುದು ಮತ್ತು ತಡೆಯುವುದು ನೈಜ ಸಲಫಿ ಸಂಘಟನೆಯಾದ ನಮ್ಮಂತಹವರ ಕರ್ತವ್ಯವಾಗಿದ್ದು ಈ ಪುಸ್ತಕವನ್ನು ಪ್ರಕಾಶಿಸಲು ಪ್ರಮುಖ ಕಾರಣವಾಗಿದೆ.

## ಪ್ರಮುಖ ವಿಷಯ:

ಇಸ್ತಿಆನ ಬಿಲ್ ಜಿನ್ನ್ ಶಿರ್ಕುಲ್ ಅಕ್ಬರ್ ಅಂದರೆ ಜಿನ್ನಿನೊಂದಿಗೆ ಸಹಾಯಯಾಚನೆ. ಇದು ಅಲ್ಲಾಹನೊಂದಿಗಿರುವ ಸಹಭಾಗಿತ್ವವಾಗಿದೆ 'ದ್ವೈತ ಸಿದ್ಧಾಂತ'. ಮತ್ತು ಘೋರ ಪಾಪವೂ ಆಗಿದೆ.

ದಕ್ಷಿಣಕನ್ನಡ ಜಿಲ್ಲೆಯಲ್ಲಿ ತೌಹೀದ್ ನಡೆದು ಬಂದ ದಾರಿ

ಇಸ್ತಿಆನ ಬಿಲ್ ಜಿನ್ನ್(ಜಿನ್ ಗಳೊಂದಿಗೆ ಸಹಾಯ ಯಾಚನೆ) ಇದು ಶಿರ್ಕಿನಲ್ಲಿ ಒಳಪಟ್ಟರಿವುದೇ ಅಥವಾ ಅದರ ಹೊರತಿರುವುದೇ

(الاستعانة والاستغاثة بغير الله من الأموات والغائبين والأصنام ونحوها شرك بالله عز وجل, وهكذا الاستغاثة والاستعانة بغير الله من الأحياء فيما لا يقدر عليه إلا الله شرك أكبر يخرج من ملة الإسلام[4] .)

'ಅಲ್ ಇಸ್ತಿಆನ ವಲ್ ಇಸ್ತಿಗಾಸ'

ಅಲ್ಲಾಹನ ಹೊರತು ಪಡಿಸಿರುವ ಮೃತರೊಂದಿಗೆ, ಅದೃಶ್ಯವಾದವುಗಳೊಂದಿಗೆ, ವಿಗ್ರಹಗಳೊಂದಿಗೆ ಇತ್ಯಾದಿಗಳೊಂದಿಗಿರುವ ಬೇಡುವಂತಹಾ ಸಹಾಯ ಯಾಚನೆ ಅಲ್ಲಾಹನಿಗೆ ಮಾಡುವ (ಶಿರ್ಕ್)ಸಹಭಾಗಿತ್ವ ವಾಗಿದೆ. ಅಲ್ಲಾಹನ ಹೊರತು ಅಸಾದ್ಯವಾಗುವ ಒಂದನ್ನು ಬದುಕಿರುವವರೊಂದಿಗೆ ಬೇಡುವ ಸಹಾಯ ಶಿರ್ಕುಲ್ ಅಕ್ಬರ್ ಮಹಾಪಾಪವಾಗಿದೆ. ಇದು ಇಸ್ಲಾಮಿನಿಂದ ಹೊರಹೋಗುವಂತಹ ಘೋರ ಪಾಪವಾಗಿದೆ.

ಇಲ್ಲಿ ವಾಚಕರಿಗಾಗಿ ಜಿನ್ನ್ ನೊಂದಿಗಿರುವ ಸಹಾಯ ಯಾಚನೆ ಎನ್ನುವ ವಿಷಯ ಮಾತ್ರವಾಗಿದೆ ಚರ್ಚಿಸುವುದಾಗಿದೆ.

ಹೀಗಿರುವಾಗ ಮೊದಲು ಜಿನ್ನ್ ಎಂದರೇನು ಎನ್ನುವುದನ್ನು ತಿಳಿಯಬೇಕಾಗುತ್ತದೆ.

ಜಿನ್ ಅಂದರೆ ಏನು?

## ಜಿನ್:

[4] ಫತಾವ ಸಂಖ್ಯೆ:7308 , ಲಜ್ನತುದಾಯಿಮ .

ಮನುಷ್ಯನ ದೃಷ್ಟಿಗೆ ಅಗೋಚರವಾಗಿರುವ ಅಲ್ಲಾಹನ ಸೃಷ್ಟಿಯಾಗಿದೆ ಜಿನ್ನ್ (ದೆವ್ವ) ಖುರ್ಆನಿನಲ್ಲಿ ಅಲ್ಲಾಹನು ಸ್ಪಷ್ಟವಾಗಿ ತಿಳಿಸಿರುವನು:

﴿وَالْجَانَّ خَلَقْنَاهُ مِن قَبْلُ مِن نَّارِ السَّمُومِ﴾

"ಜಿನ್ನ್‌ಗಳನ್ನು ನಾವು ಅದಕ್ಕಿಂತ(ಮನುಷ್ಯ ಸೃಷ್ಟಿಯ)ಮುಂಚೆಯೇ ಅತಿಶಾಖವಿರುವ ಅಗ್ನಿಜ್ವಾಲೆಯಿಂದ ಸೃಷ್ಟಿಸಿದೆವು".[5]

ಖುರ್ಆನಿನ ಈ ಸೂಕ್ತದ ಆಧಾರದ ಮೇಲೆ ನಮಗೆ ತಿಳಿದು ಬರುವುದು ಏನೆಂದರೆ ಮನುಷ್ಯವರ್ಗಕ್ಕಿಂತ ಮುಂಚೆಯೇ ಅಲ್ಲಾಹನು ಜಿನ್ನ್ ವರ್ಗವನ್ನು ತಪತಪಿಸುತ್ತಿರುವ ಅಗ್ನಿಜ್ವಾಲೆಯಿಂದ ಸೃಷ್ಟಿಸಿರುವನು.

ಯಾವ ರೀತಿಯ ಅಗ್ನಿ ಎನ್ನುವುದರ ಬಗ್ಗೆ ಅಲ್ಲಾಹನು ಹೇಳುತ್ತಾನೆ:

﴿وَخَلَقَ الْجَانَّ مِن مَّارِجٍ مِّن نَّارٍ﴾

"ಅಗ್ನಿಯ ಹೊಗೆರಹಿತ ಜ್ವಾಲೆಯಿಂದ ಅವನು ಜಿನ್ನ್‌ಗಳನ್ನು ಸೃಷ್ಟಿಸಿದನು".[6]

ಈ ಸೂಕ್ತವನ್ನು ಅವಲೋಕಿಸುವಾಗ ಅಲ್ಲಾಹನು ಯಾವರೀತಿಯಲ್ಲಿ ಮನುಷ್ಯವರ್ಗವನ್ನು ಯಾವ ರೀತಿಯಲ್ಲಿ ಶುದ್ಧ ಜೇಡಿಮಣ್ಣಿನಿಂದ ಸೃಷ್ಟಿಸಿರುವನೋ ಅದೇ ರೀತಿ. ಜಿನ್ನ್ ವರ್ಗವನ್ನೂ ಶುದ್ಧವಾದ ಅಗ್ನಿಯಿಂದ ಸೃಷ್ಟಿಸಿರುವನು. ಇಬ್ನ್ ಅಬ್ಬಾಸ್ (ರ) ರವರಿಂದ ವರದಿ:

ابن عباس، قوله: ﴿مِنْ مَارِجٍ مِنْ نَارٍ﴾ يقول: خالص النار

"ಅಗ್ನಿಯ ಹೊಗೆರಹಿತ ಜ್ವಾಲೆಯಿಂದ ಅವನು ಜಿನ್ನ್‌ಗಳನ್ನು ಸೃಷ್ಟಿಸಿದನು" ಅಂದರೆ ಶುದ್ಧ ಅಗ್ನಿ[7] ಇಲ್ಲಿ ನಮಗೆ ಎರಡು ಕಾರ್ಯಗಳು; ಒಂದು ಜಿನ್ನನ್ನು

---

[5] ಸೂರಃ ಅಲ್ ಹಿಜ್ರ್–27

[6] ಸೂರಃ ಅರ್ರಹ್ಮಾನ್ –15

ಮನುಷ್ಯವರ್ಗಕ್ಕಿಂತ ಮುಂಚೆಯೇ ಸೃಷ್ಟಿಸಲಾಗಿತ್ತೆಂದೂ ಮತ್ತು ಶುದ್ಧವಾದ ಹೊಗೆರಹಿತ ಅಗ್ನಿಯಿಂದ ಸೃಷ್ಟಿಸಲಾಯಿತೆಂದು ಮನದಟ್ಟಾದವು

## ನಮ್ಮ ಮುಂದೆ ಜಿನ್‌ಗಳು ಗೋಚರಿಸುತ್ತವೆಯೇ?:

ಅಲ್ಲಾಹನು ಖುರ್ಆನಿನಲ್ಲಿ ವಿವರಿಸುತ್ತಾನೆ:

﴿إِنَّهُ يَرَاكُمْ هُوَ وَقَبِيلُهُ مِنْ حَيْثُ لَا تَرَوْنَهُمْ ﴾ (27)

“ಖಂಡಿತವಾಗಿಯೂ ನೀವು ಅವರನ್ನು ನೋಡಲಸಾಧ್ಯವಾದಂತಹ ವಿಧದಲ್ಲಿ ಅವನು ಮತ್ತು ಅವನ ಪಂಗಡದವರು ನಿಮ್ಮನ್ನು ನೋಡುತ್ತಿರುವರು”.[8]

ಈ ಸೂಕ್ತದಲ್ಲಿ ಜಿನ್ ವರ್ಗಗಳು ಮನುಷ್ಯರನ್ನು ನೋಡುವ ರೀತಿ ಮನುಷ್ಯನು ಅವುಗಳನ್ನು ನೋಡಲಸಾಧ್ಯವೆಂದು ಸ್ಪಷ್ಟವಾಗುತ್ತದೆ.

ಅಶ್ಯೇಖ್ ಮೊಹಮ್ಮದ್ ಸ್ವಾಲಿಹುಲ್ ಮುನಜ್ಜಿದ್ ತನ್ನ ಪ್ರಶ್ನೋತ್ತರ ಪಂಕ್ತಿಯಲ್ಲಿಯ ಪ್ರಶ್ನೆ ಸಂಖ್ಯೆ 40703 ಯಲ್ಲಿ ‘ಮನುಷ್ಯನಂತೆ ಜಿನ್ನ್ ಪ್ರತ್ಯಕ್ಷನಾಗುತ್ತಾನೆಯೇ ಮತ್ತು ಜಿನ್ನಿಗೆ ಸ್ವಹೀಹಾದ ರೂಪವಿದೆಯೇ?’ ಎನ್ನುವ ಪ್ರಶ್ನೆಗೆ ಉತ್ತರಿಸುತ್ತಾ ಬರೆಯುತ್ತಾರೆ:

الحمد لله هذا السؤال مكون من شقين: الأول : هل تظهر الجن بصور الإنسان ؟ الثاني : هل هناك صورة صحيحة للجن ؟ أما الشق الأول : فيقال:

---

[7] ತಫ್ಸೀರ್ ಇಬ್ನ್ ಅಬೀ ಹಾತಿಮ್

[8] ಸೂರಃ ಅಲ್ ಆರಾಫ್ –27

أولا : اعلم أن الأصل في الجن أنهم مستترون عن الإنس ، ولهذا سُمُّوا (جنا) لأن المادة اللغوية (جن) الجيم والنون تدل على أصل واحد ، وهو السَّتْر و التستُّر . (كما قال ابن فارس في مقاييس اللغة مادة جن ) . فالجن سموا بذلك لأنهم مستترون عن الإنس ، والجنين سمي بذلك لأنه مستتر في بطن أمه ، والجنة لأنها مستترة بالأشجار ، والمجنون لأن عقله مستتر وهكذا في جميع الاشتقاق.

ಸರ್ವಸ್ತುತಿಯು ಅಲ್ಲಾಹನಿಗಾಗಿದೆ. ಈ ಪ್ರಶ್ನೆಯು ಎರಡು ಅಂಶಗಳ ಮೇಲೆ ಹೊಂದಿಕೊಂಡಿವೆ.

ಮೊದಲನೇಯದು: ಜಿನ್ನ್ ಮನುಷ್ಯನ ರೂಪದಲ್ಲಿ ರೂಪಾಂತರ ಗೊಳ್ಳುತ್ತವೆಯೇ? ಎರಡನೇಯದಾಗಿ: ಸರಿಯಾದ ರೂಪವು ಜಿನ್ನುಗಳಿಗಿದೆಯೆ?

ಮೊದಲನೇಯ ವಿಷಯದ ಬಗ್ಗೆ ಹೇಳುವುದಾದರೆ. ಜಿನ್ನ್ ಮೂಲದಲ್ಲಿ ಮನುಷ್ಯನಿಂದ ಮರೆಯಾಗಿರುವುದಾಗಿದೆ ಎನ್ನುವ ವಿಷಯ ತಿಳಿಯಬೇಕು. ಅದಕ್ಕಾಗಿ ಜಿನ್ನ್ ಎಂದು ಹೇಳಲಾಗುತ್ತದೆ. ಜಿನ್ನ ಎಂದರೆ ಅರಬಿ ಪದ ಪ್ರಯೋಗದಲ್ಲಿ ಮರೆ, ಅಡಗಿದ, ಅಗೋಚರವಾದ ಒಂದಕ್ಕೆ ಹೇಳಲಾಗುವುದು.) ಇಬ್ನುಲ್ ಫಾರಿಸ್ ತನ್ನ 'ಮಖಾಯಿಸು ಅಲ್ಲುಗಃ' ದಲ್ಲಿ ಹೇಳಿರುವುದೇನೆಂದರೆ. ಮನುಷ್ಯಮುಂದೆ ಅಗೋಚರವಾಗಿರುವುದರಿಂದ ಜಿನ್ನ್ ಎಂದು ಹೇಳಲಾಗುತ್ತದೆ, **'ಜನೀನ್'**(ಗರ್ಭದಲ್ಲಿರುವ ಮಗು) ಎಂದು ಗರ್ಭದಲ್ಲಿರುವ ಮಗುವಿಗೆ ಹೇಳಲಾಗುತ್ತದೆ ಕಾರಣ ತಾಯಿಯ ಗರ್ಭಾಶಯದಲ್ಲಿ ಮಗು ಮರೆಯಾಗಿರುವುದರಿಂದ. **'ಅಲ್ ಜನ್ನಃ'** (ತೋಟ)ವೃಕ್ಷಗಳಿಂದ ತೋಟವು ಮರೆಯಾಗಿರುವುದರಿಂದ ಅವುಗಳಿಗೆ ಅಲ್ ಜನ್ನಃ ಎಂದು ಹೇಳಲಾಗುವುದು. **'ಮಜ್ನೂನ್'** (ಹುಚ್ಚ) ಬುದ್ಧಿಯು

ಹೀನಾವಾಗಿರುವುದರಿಂದ ಮಜ್ನೂನ್ ಎಂದು ಹೇಳಲಾಗುವುದು. ಇದೇ ರೀತಿ ಇತ್ಯಾದಿ.

ثانيا : هل يمكن أن يظهروا في صور يراهم الناس فيها ؟

والجواب عن ذلك : أنه ثبت في السنة وفي الواقع ظهور الجن على صور مختلفة كصور الناس والحيوانات وغيرها ، فمن أصرح الأدلة على ذلك من السنة تلك القصة التي رواها البخاري (3275)

عَنْ أَبِي هُرَيْرَةَ ـ رضى الله عنه ـ قَالَ وَكَّلَنِي رَسُولُ اللَّهِ صلى الله عليه وسلم بِحِفْظِ زَكَاةِ رَمَضَانَ، فَأَتَانِي آتٍ فَجَعَلَ يَحْثُو مِنَ الطَّعَامِ، فَأَخَذْتُهُ، وَقُلْتُ وَاللَّهِ لأَرْفَعَنَّكَ إِلَى رَسُولِ اللَّهِ صلى الله عليه وسلم. قَالَ إِنِّي مُحْتَاجٌ، وَعَلَىَّ عِيَالٌ، وَلِي حَاجَةٌ شَدِيدَةٌ. قَالَ فَخَلَّيْتُ عَنْهُ فَأَصْبَحْتُ فَقَالَ النَّبِيُّ صلى الله عليه وسلم " يَا أَبَا هُرَيْرَةَ مَا فَعَلَ أَسِيرُكَ الْبَارِحَةَ ". قَالَ قُلْتُ يَا رَسُولَ اللَّهِ شَكَا حَاجَةً شَدِيدَةً وَعِيَالاً فَرَحِمْتُهُ، فَخَلَّيْتُ سَبِيلَهُ. قَالَ " أَمَا إِنَّهُ قَدْ كَذَبَكَ وَسَيَعُودُ ". فَعَرَفْتُ أَنَّهُ سَيَعُودُ لِقَوْلِ رَسُولِ اللَّهِ صلى الله عليه وسلم إِنَّهُ سَيَعُودُ. فَرَصَدْتُهُ فَجَاءَ يَحْثُو مِنَ الطَّعَامِ فَأَخَذْتُهُ فَقُلْتُ لأَرْفَعَنَّكَ إِلَى رَسُولِ اللَّهِ صلى الله عليه وسلم. قَالَ دَعْنِي فَإِنِّي مُحْتَاجٌ، وَعَلَىَّ عِيَالٌ لاَ أَعُودُ، فَرَحِمْتُهُ، فَخَلَّيْتُ سَبِيلَهُ فَأَصْبَحْتُ، فَقَالَ لِي رَسُولُ اللَّهِ صلى الله عليه وسلم " يَا أَبَا هُرَيْرَةَ، مَا

فَعَلَ أَسِيرُكَ ". قُلْتُ يَا رَسُولَ اللَّهِ شَكَا حَاجَةً شَدِيدَةً وَعِيَالاً، فَرَحِمْتُهُ فَخَلَّيْتُ سَبِيلَهُ. قَالَ " أَمَا إِنَّهُ قَدْ كَذَبَكَ وَسَيَعُودُ ". فَرَصَدْتُهُ الثَّالِثَةَ فَجَاءَ يَحْثُو مِنَ الطَّعَامِ، فَأَخَذْتُهُ فَقُلْتُ لأَرْفَعَنَّكَ إِلَى رَسُولِ اللَّهِ صلى الله عليه وسلم، وَهَذَا آخِرُ ثَلاَثِ مَرَّاتٍ أَنَّكَ تَزْعُمُ لاَ تَعُودُ ثُمَّ تَعُودُ. قَالَ دَعْنِي أُعَلِّمْكَ كَلِمَاتٍ يَنْفَعُكَ اللَّهُ بِهَا. قُلْتُ مَا هُوَ قَالَ إِذَا أَوَيْتَ إِلَى فِرَاشِكَ فَاقْرَأْ آيَةَ الْكُرْسِيِّ {اللَّهُ لاَ إِلَهَ إِلاَّ هُوَ الْحَيُّ الْقَيُّومُ} حَتَّى تَخْتِمَ الآيَةَ، فَإِنَّكَ لَنْ يَزَالَ عَلَيْكَ مِنَ اللَّهِ حَافِظٌ وَلاَ يَقْرَبَنَّكَ شَيْطَانٌ حَتَّى تُصْبِحَ. فَخَلَّيْتُ سَبِيلَهُ فَأَصْبَحْتُ، فَقَالَ لِي رَسُولُ اللَّهِ صلى الله عليه وسلم " مَا فَعَلَ أَسِيرُكَ الْبَارِحَةَ ". قُلْتُ يَا رَسُولَ اللَّهِ زَعَمَ أَنَّهُ يُعَلِّمُنِي كَلِمَاتٍ، يَنْفَعُنِي اللَّهُ بِهَا، فَخَلَّيْتُ سَبِيلَهُ. قَالَ " مَا هِيَ ". قُلْتُ قَالَ لِي إِذَا أَوَيْتَ إِلَى فِرَاشِكَ فَاقْرَأْ آيَةَ الْكُرْسِيِّ مِنْ أَوَّلِهَا حَتَّى تَخْتِمَ {اللَّهُ لاَ إِلَهَ إِلاَّ هُوَ الْحَيُّ الْقَيُّومُ} وَقَالَ لِي لَنْ يَزَالَ عَلَيْكَ مِنَ اللَّهِ حَافِظٌ وَلاَ يَقْرَبَكَ شَيْطَانٌ حَتَّى تُصْبِحَ، وَكَانُوا أَحْرَصَ شَىْءٍ عَلَى الْخَيْرِ. فَقَالَ النَّبِيُّ صلى الله عليه وسلم " أَمَا إِنَّهُ قَدْ صَدَقَكَ وَهُوَ كَذُوبٌ، تَعْلَمُ مَنْ تُخَاطِبُ مُنْذُ ثَلاَثِ لَيَالٍ يَا أَبَا هُرَيْرَةَ ". قَالَ لاَ. قَالَ " ذَاكَ شَيْطَانٌ ".

ಎರಡನೇಯದಾಗಿ ಮನುಷ್ಯರಿಗೆ ಗೋಚರವಾಗುವ ರೀತಿಯಲ್ಲಿ ಜಿನ್ನನ್ನು ನೋಡಲು ಸಾದ್ಯವೇ?

ಅದಕ್ಕೆ ಉತ್ತರವಾಗಿ ಹೇಳುವುದಾದರೆ. ಜಿನ್ನ ವೈತ್ಯಸ್ತ ರೂಪಗಳಲ್ಲಿ ಗೋಚರಿಸಿರುವುದು ಸುನ್ನತ್ತಿನಲ್ಲಿ ಸಾಬೀತಾಗಿರುವ ವಿಷಯವಾಗಿದೆ ಮನುಷ್ಯರ,

ಪ್ರಾಣಿಗಳ, ಇತ್ಯಾದಿ ರೂಪಗಳಂತೆ ಇಮಾಮ್ ಬುಖಾರಿಯ (3275) ನೇ ಉಲ್ಲೇಖದಲ್ಲಿ ಬಂದಿರುವ ಚರಿತ್ರೆಯಂತೆ.

"ಅಬೂ ಹುರೈರಾ (ರ) ರವರಿಂದ ವರದಿ: ಹೇಳುತ್ತಾರೆ, ಪ್ರವಾದಿ (ﷺ)ರವರು ನನ್ನನ್ನು ರಮಝಾನಿನ ಝಕಾತನ್ನು ಕಾಯಲು ನೇಮಿಸಿದರು. ರಾತ್ರಿ ಒಬ್ಬ ವ್ಯಕ್ತಿ ಆಕಸ್ಮಿಕವಾಗಿ ನನ್ನಬಳಿ ಬಂದ ಮತ್ತು ಸೂಕ್ಷಿಸಲಾಗಿರುವ ಆಹಾರ ದಾನ್ಯಗಳಿಂದ ತುಂಬಿಸುತ್ತಾ ಎತ್ತಲು ಆರಂಭಿಸುವಾಗ ನಾನವನನ್ನು ಹಿಡಿದೆನು ನಂತರ ಹೇಳಿದೆ ಅಲ್ಲಾಹನಾಣೆ! ನಿನ್ನನ್ನು ಪ್ರವಾದಿ (ﷺ)ರವರ ಸನ್ನಿಧಿಗೆ ಕೊಂಡೊಯ್ಯುವೆನು. ಅವಾಗ ಅವನು ಹೇಳಿದನು ಅಲ್ಲಾಹನಾಣೆ! ನಾನು ಬಹಳ ಕಡುಬಡವನಾಗಿರುವೆನು ನನ್ನ ಕುಟುಂಬವಿದೆ ನನಗೆ ಆಹಾರಗಳ ಆಗತ್ಯವಿದೆ; ಅಬೂಹುರ್ರೈರಾ (ರ) ರವರು ಹೇಳಿದರು ಅವನ ಕ್ಷಮಾಯಾಚನೆಗಾಗಿ ಅವನನ್ನು ನಾನು ಬಿಟ್ಟುಬಿಟ್ಟೆನು. ಬೆಳಿಗ್ಗೆಯಾದ ಪ್ರವಾದಿ (ﷺ)ರವರು ನನ್ನಲ್ಲಿ ಕೇಳಿದರು ಓ ಅಬೂಹುರ್ರೈರಾ ನಿನ್ನೆ ರಾತ್ರಿ ನಿಮ್ಮ ಕೈದಿ ಏನು ಮಾಡಿರುವನು? ಯಾ ರಸೂಲುಲ್ಲಾಹ್! ಅವನು ಕಡುಬಡವನೆಂದೂ ಅವನ ಕುಟುಂಬಕ್ಕೆ ಆವಶ್ಯಕತೆ ಹೆಚ್ಚಿರುವುದಾಗಿಯೂ ನನ್ನಲ್ಲಿ ತೋಡಿಕೊಂಡಾಗ ನನಗೆ ಅವನ ಮೇಲೆ ಕರುಣೆತೋರಿತು ಹಾಗೆ ನಾನವನನ್ನು ಬಿಟ್ಟುಬಿಟ್ಟೆನು. ಪ್ರವಾದಿ (ﷺ)ರವರು ಹೇಳಿದರು ಅವನು ನಿಮ್ಮಲ್ಲಿ ಸುಳ್ಳುಹೇಳಿ ಹೋಗಿರುವನು ಪುನಃ ಬರುವನು. ಪ್ರವಾದಿ(ﷺ)ರವರ ಆ ಮಾತುಗಳಿಂದ ಅವನು ಪುನಃ ಬರುವನೆಂದು ನನಗೆ ದೃಢವಾಗಿತ್ತು. ಆದುದರಿಂದ ನಾನು ಅವನನ್ನು ನಿರೀಕ್ಷಿಸುತ್ತಾ ಇದ್ದೆ. ಹಾಗೆ ಅವನು ಮರುದಿನವೂ ಬಂದು ಆಹಾರ ದಾನ್ಯವನ್ನು ತುಂಬಲು ಆರಂಭಿಸಿದಾಗ ಪುನಃ ನಾನವನನ್ನು ಹಿಡಿದೆ. ನಿನ್ನನ್ನು ಪ್ರವಾದಿ(ﷺ)ರವರು ಸನ್ನಿಧಿಯಲ್ಲಿ ಹಾಜರು ಪಡಿಸುವೆ ಎಂದು ಹೇಳಿದೆ. ಆದರೆ ಅವನ ಅದೇ ರೋದನವಾಗಿತ್ತು ನಾನು ಕಡುಬಡವನು ಮಕ್ಕಳುಮರಿಯ ಹೊರೆ ನನ್ನ ಮೇಲಿದೆ ಇನ್ನು ನಾನೆಂದೂ ಮರಳಿಬರಲಾರೆನು. (ಈ ಮಾತು ಕೇಳಿದ ಅಬೂ ಹುರ್ರ್ಯಾರ (ರ) ಹೇಳುತ್ತಾರೆ)

ನನಗೆ ಕರುಣೆತೋರಿತು ಹಾಗೆ ಅವನನ್ನು ಪುನಃ ಬಿಟ್ಟುಬಿಟ್ಟೆನು. ಪ್ರಭಾತವಾದಾಗ ಪ್ರವಾದಿ (ﷺ)ರವರು ಹೇಳಿದರು ಅಬೂಹುರ್ರೈರಾ! ನಿಮ್ಮ ಕೈದಿ ಏನು ಮಾಡಿರುವನು? ನಾನು ಹೇಳಿದೆ ಯಾ ರಸೂಲುಲ್ಲಾಹ್! ಅವನು ಪುನಃ ನಾನು ನಿರ್ಗತಿಕನು ನನ್ನ ಮೇಲೆ ಅವಲಂಬಿತರಿರುವರು ಎನ್ನುವ ರೋದನವನ್ನು ಮುಂದಿಟ್ಟನು ಆದುದರಿಂದ ನನಗೆ ಕರುಣೆ ತೋರಿತು ನಾನು ಬಿಟ್ಟುಬಿಟ್ಟೆನು. ಪ್ರವಾದಿ (ﷺ)ರವರು ಈ ಬಾರಿಯೂ ಅವನು ನಿಮ್ಮೊಂದಿಗೆ ಸುಳ್ಳಾಡಿದನು ಪುನಃ ಬರುವನು ಎಂದು ಹೇಳಿದರು. ಮೂರನೇ ಬಾರಿ ಅವನ ನಿರೀಕ್ಷೆಯಲ್ಲಿ ಕಾಯುತಿದ್ದೆ ಅವನು ಮರಳಿ ಮೂರನೇ ರಾತ್ರಿಯೂ ಬಂದು ಆಹಾರವನ್ನು ತುಂಬಲು ಪ್ರಾರಂಭಿಸುತ್ತಿರುವಾಗ ನಾನವನನ್ನು ಹಿಡಿದೆನು ನಂತರ ಹೇಳಿದೆ ಈವಾಗ ನಿನ್ನನ್ನು ಪ್ರವಾದಿ (ﷺ)ರವರ ಸನ್ನಿಧಿಗೆ ಕರೆದು ಕೊಂಡುಹೋಗಲು ಅನಿವಾರ್ಯವಾಗಿರುತ್ತದೆ. ಇದು ಮೂರನೇ ಅವಸರವಾಗಿದೆ. ಪ್ರತೀಸಲವು ನೀನು ಮರಳಿಬರಲಾರೆನೆಂದು ನನ್ನನ್ನು ನಂಬಿಸುತಿದ್ದೆ ಆದರೆ ನೀನು ಸುಮ್ಮನಾಗಲಿಲ್ಲ. ಅವನು ಹೇಳಿದನು ಈ ಬಾರಿ ನನ್ನನ್ನು ಬಿಟ್ಟುಬಿಟ್ಟರೆ ನಾನು ನಿಮಗೆ ಆ ಒಂದು ವಾಕ್ಯವನ್ನು ತಿಳಿಸುವೆ ಅದರಿಂದ ಅಲ್ಲಾಹನು ನಿಮಗೆ ಫಲನೀಡುವನು. ನಾನು ಕೇಳಿದೆ ಆ ವಾಕ್ಯಯಾವುದು? ನೀವು ಹಾಸಿಗೆಯಲ್ಲಿ ಮಲಗುವ ವೇಳೆ ಆಯಾತುಲ್ ಕುರ್ಸಿಯ್ ( ಅಲ್ಲಾಹು ಲಾಯಿಲಾಹ..) ಸಂಪೂರ್ಣ ಓದಿಕೊಳ್ಳಿರಿ ಅಲ್ಲಾಹನ ಕಡೆಯಿಂದ ಒಬ್ಬ ಕಾಯುವ ಮಲಾಯಿಕ ನಿಮ್ಮನ್ನು ನೋಡಿಕೊಳ್ಳುತಿರುವ ಬೆಳಿಗ್ಗೆಯ ತನಕ ನಿಮ್ಮ ಬಳಿ ಒಮ್ಮೆಯೂ ಶೈತಾನನು ಬರಲಾರನು. ಈ ಸಲವೂ ನಾನವನನ್ನು ಬಿಟ್ಟುಬಟ್ಟೆನು. ಬೆಳಿಗ್ಗೆಯಾದಾಕ್ಷಣ ಪ್ರವಾದಿ (ﷺ)ರವರು ನಿನ್ನೆ ರಾತ್ರಿ ನಿಮ್ಮ ಕೈದಿ ಏನು ಮಾಡಿರುವನೆಂದು ವಿಚಾರಿಸಿದರು. ಯಾ ರಸೂಲುಲ್ಲಾಹ್! ನನಗೆ ಕೆಲವು ವಾಕ್ಯವನ್ನು ಕಲಿಸಿ ಅಲ್ಲಾಹನು ನನಗೆ ಅಭಯಕೊಡುವನೆಂದು ಹೇಳಿದ ಆದುದರಿಂದ ನಾನವನನ್ನು ಬಿಟ್ಟುಬಿಟ್ಟೆನು ಎಂದು ಹೇಳಿದೆ. ಪ್ರವಾದಿ (ﷺ)ರವರು ಆ

ವಾಕ್ಯಗಳ್ಯಾವುದೆಂದು ವಿಚಾರಿಸಿದರು? ಮಲಗುವಾಗ ಆಯಾತುಲ್ ಕುರ್ಸಿಯ್ ಓದಿರಿ ಎಂದು ಅಲ್ಲದೇ ಅಲ್ಲಾಹನ ಕಡೆಯಿಂದ ಒಬ್ಬ ಮಲಕ್ ನನ್ನನ್ನು ಕಾಯಲು ನಿಯೋಗಿಸಲಾಗುವುದೆಂದೂ ಶ್ಯತಾನನು ನಿಮ್ಮ ಬಳಿ ಸುಳಿಯಲಾರನೆಂದು ಅವನು ನನ್ನಲ್ಲಿ ಹೇಳಿದನು. ಸ್ವಹಾಬ (ರ) ರವರು ಶ್ರೇಷ್ಟವಾದುದಕ್ಕೆ ಪ್ರಥಮ ಸ್ಥಾನ ಕೊಡುವವರಾಗಿರುವರು. ಪ್ರವಾದಿ (ಸ) ರವರು ಅವರ ಈ ಮಾತು ಕೇಳಿ ಹೇಳಿದರು ಅವನು ಸುಳ್ಳನಾದರೂ ಹೇಳಿದ ಮಾತು ನಿಜವಾಗಿದೆ. ಓ ಅಬೂಹುರ್‍ಯರಾರವರೇ! ತಮಗೆ ತಿಳಿದಿದೆಯೇನು ಮೂರು ರಾತ್ರಿಗಳಲ್ಲಿ ನಿಮ್ಮ ವ್ಯವಹಾರ ಯಾರೊಂದಿಗಾಗಿತ್ತೆಂದು? ಅವರು ಹೇಳಿದರು ಇಲ್ಲ! ಪ್ರವಾದಿ (ﷺ)ರವರು ಹೇಳಿದರು ಅವನು ಶ್ಯತಾನನಾಗಿರುತ್ತಾನೆ".

ಹಾಫಿಳ್ ಇಬ್ನ ಹಜರ್ ಅಸ್ಕಲಾನಿ ಪ್ರಖ್ಯಾತ ಗ್ರಂಥವಾದ ಫತಹುಲ್ ಬಾರಿಯಲ್ಲಿ ವಿವರಿಸುವುದನ್ನು ನೋಡಿರಿ:

قال الحافظ ابن حجر في الفتح : " أَنَّ الشَّيْطَانَ مِنْ شَأْنِهِ أَنْ يَكْذِبَ وَأَنَّهُ قَدْ يَتَصَوَّرُ بِبَعْضِ الصُّوَرِ فَتُمْكِنُ رُؤْيَتُهُ وَأَنَّ قَوْلَهُ تَعَالَى إِنَّهُ يَرَاكُمْ هُوَ وَقَبِيلُهُ مِنْ حَيْثُ لَا ترونهم مَخْصُوصٌ بِمَا إِذَا كَانَ عَلَى صُورَتِهِ الَّتِي خُلِقَ عَلَيْهَا " اهـ[9]

"ನಿಶ್ಚಯವಾಗಿಯೂ ಸುಳ್ಳು ಹೇಳುವುದು ಶ್ಯತಾನನ ಕೆಲಸವಾಗಿದೆ, ಅಲ್ಲದೇ ಅವನು ಕೆಲವು ರೂಪಗಳಲ್ಲಿ ರೂಪಾಂತರಗೊಂಡಾಗ ಅವನನ್ನು ನೋಡಲು ಸಾಧ್ಯವಾಗುವುದು." ಅಲ್ಲಾಹನು ಹೇಳುತ್ತಾನೆ: "ಖಂಡಿತವಾಗಿಯೂ ನೀವು ಅವರನ್ನು ನೋಡಲಸಾಧ್ಯವಾದಂತಹ ವಿಧದಲ್ಲಿ ಅವನು ಮತ್ತು ಅವನ ಪಂಗಡದವರು ನಿಮ್ಮನ್ನು ವೀಕ್ಷಿಸುತ್ತಿರುವರು" ಎನ್ನುವುದು ಪ್ರತ್ಯೇಖವಾಗಿ

[9] ಫತುಹುಲ್ ಬಾರಿ ಶರಹು ಸ್ವಹೀಹುಲ್ ಬುಖಾರಿ–4/489 (ಅಹ್ಮದ್ ಬಿನ್ ಅಲೀ ಬಿನ್ ಹಜರ್ ಅಬುಲ್ ಫಳಳ್ ಅಲ್ ಅಸ್ಕಲಾನಿ ಅಶ್ಶಾಫಿಯೀ.)

ಸೃಷ್ಟಿಸಿದ ಯಾತಾರ್ಥ ರೂಪದಲ್ಲೇ ನೊಡಲು ಅಸಾಧ್ಯವಾಗಿರುವುದಾಗಿದೆ. (ಹೊರತು ರೂಪಾಂತರ ಗೊಂಡಾಗವಲ್ಲ)

ಇಮಾಮ್ ನವವಿ ಶರಹು ಸ್ವಹೀಹುಲ್ ಮುಸ್ಲಿಂ ನಲ್ಲಿ ಅಬೀ ಸಯೀದಿನಿಲ್ ಖುದ್ರೀ (ರ) ರವರಿಂದ ಉದ್ಧರಿತ ವರದಿಯನ್ನು ಉಲ್ಲೇಖಿಸುತ್ತಾ:

قَالَ : سَمِعْتُ رَسُولُ اللَّهِ صَلَّى اللَّهُ عَلَيْهِ وَسَلَّمَ يقول : ( إِنَّ بِالْمَدِينَةِ نَفَرًا مِنْ الْجِنِّ قَدْ أَسْلَمُوا فَمَنْ رَأَى شَيْئًا مِنْ هَذِهِ الْعَوَامِرِ فَلْيُؤْذِنْهُ ثَلاثًا فَإِنْ بَدَا لَهُ بَعْدُ فَلْيَقْتُلْهُ فَإِنَّهُ شَيْطَانٌ[10] ).

ನಾನು ಪ್ರವಾದಿ (ﷺ)ರವರು ಹೇಳುವುದಾಗಿ ಆಲಿಸಿರುವೆನು " ಮದೀನದಲ್ಲಿಯ ಜಿನ್ನ್ ವರ್ಗದವರಲ್ಲಿ ಕೆಲವರು ಮುಸ್ಲಿಮಾಗಿರುವರು ಆ ನಿವಾಸಿಗಳಿಂದ ಯಾರಾದರೂ ಏನನ್ನಾದರೂ ಕಂಡರೆ ಮೂರು ಬಾರಿ ಸಾರಿ ಹೇಳಿರಿ ಅದರ ನಂತರ ಅಪ್ರತ್ಯಕ್ಷವಾಗದೇ ಇದ್ದರೆ ಅವುಗಳನ್ನು ಕೊಳ್ಳಿರಿ ನಿಶ್ಚಯವಾಗಿಯೂ ಅವನು ಶ್ಯತಾನಾಗಿರುವನು".

والعوامر : الحيات والثعابين التي تكون في البيوت ، لا تقتل حتى تستأذن ثلاثاً فقد تكون من الجن ..

ಅಲ್ಲಿರುವ ಕಲ್ಪನೆಯು 'ಹಾವು ಮತ್ತು ಹೆಬ್ಬಾವುಗಳು ಅವುಗಳ ಹುತ್ತ ಅಥವಾ ಗುಹೆಗಳಲ್ಲಿ ವಾಸವಾಗಿರುವವುಗಳಾಗಿವೆ ಮೂರು ಬಾರಿ ಸಾರದೇ ಅವುಗಳನ್ನು ಕೊಳ್ಳಬಾರದು ಕೆಲವೊಮ್ಮೆ ಅವುಗಳು ಜಿನ್ನ್ ಗಳಾಗಿರುಬಹುದು'.[11]

ಈ ಹದೀಸಿನ ಅರ್ಥವನ್ನು ವಿವರಿಸುತ್ತಾ ಇಮಾಮ್ ನವವಿ ಶರಹುಲ್ ಮುಸ್ಲಿಂನಲ್ಲಿ ಹೇಳಿರುವುದು

---

[10] ಸ್ವಹೀಹುಲ್ ಮುಸ್ಲಿಂ–2236

[11] 'ಗರೀಬುಲ್ ಹದೀಸ್' –ಇಬ್ನುಲ್ ಅಸೀರ್.

« مَعْنَاهُ وَإِذَا لَمْ يَذْهَبْ بِالْإِنْذَارِ عَلِمْتُمْ أَنَّهُ ليس من عوامر البيوت ولا ممن أسلم من الجن بل هو شيطان فلاحرمة عَلَيْكُمْ فَاقْتُلُوهُ » .[12]

"ಅದರ ಅರ್ಥ ಮೂರು ಬಾರಿ ಸಾರುವುದರಿಂದ ಅವುಗಳು ಹೋಗದೇ ಇದ್ದರೆ ಮನೆಗಳಲ್ಲಿರುವುದೋ ಮುಸ್ಲಿಮಾಗಿರುವ ಜಿನ್ನೋ ಅಲ್ಲ ಹೊರತು ಶ್ಯತಾನ್ ಆಗಿರುತ್ತದೆ ಅವುಗಳ ಮೇಲೆ ಯಾವುದೇ ರೀತಿಯ ಗೌರವವಿಲ್ಲ ಅವುಗಳನ್ನು ಕೊಳ್ಳಿರಿ"

ಈ ರೀತಿಯ ಬಹಳಷ್ಟು ಸಂಭವಗಳು ನೋಡಲು ಸಾದ್ಯವಾಗುತ್ತದೆ. ಶ್ಯೇಖುಲ್ ಇಸ್ಲಾಮ್ ಇಬ್ನ್ ತೀಮೀಯಾ ರಹಿಮಹುಲ್ಲಾಹ್ ಹೇಳುತ್ತಾರೆ:

( والجن يتصورون في صور الإنس والبهائم فيتصورون في صور الحيات والعقارب وغيرها وفي صور الإبل والبقر والغنم والخيل والبغال والحمير وفى صور الطير وفى صور بنى آدم كما أتى الشيطان قريشا في صورة سراقة بن مالك بن جعشم لما أرادوا الخروج إلى بدر )[13]

"ಜಿನ್ನ್‌ಗಳು ಮನುಷ್ಯ ಮತ್ತು ಪ್ರಾಣಿಗಳ ರೂಪದಲ್ಲಿ, ಹಾವು, ಚೇಳು, ಇತ್ಯಾದಿಗಳ ರೂಪದಲ್ಲೂ, ಮತ್ತು ಒಂಟೆ, ಹಸು, ಆಡು, ಕುದುರೆ, ಕತ್ತೆ ಮತ್ತು ಹಂದಿಯ ರೂಪದಲ್ಲೂ ಮತ್ತು ಪಕ್ಷಿ ಹಾಗೂ ಮುಶ್ರಿಕರು ಬದರ್ ಯುದ್ಧಕ್ಕೆ ಹೊರಡುವಾಗ ಶ್ಯತಾನನು ಖುರ್ಯಶರಲ್ಲಿಯ ಸುರಾಕತ ಇಬ್ನ್ ಮಾಲಿಕ ಬಿನ್ ಜಅಶಮ್ ರೂಪದಲ್ಲಿಯೂ ರೂಪಾಂತರಗೊಂಡು ಬಂದಿರುವುದಾಗಿದೆ.

ಇನ್ನೂ ಸಹ ಬಹಳಷ್ಟು ಮಾತುಗಳನ್ನು ಶ್ಯೇಖುಲ್ ಇಸ್ಲಾಮ್ ಇಬ್ನ್ ತೀಮೀಯ ರಹಿಮಹುಲ್ಲಾ ಹೇಳಿರುವುದು ಖುರ್ಆನ್ ಸುನ್ನತ್ತಿನ ಆಧಾರದಲ್ಲಾಗಿರುತ್ತದೆ ಇದೆಲ್ಲ ಕಾರ್ಯಗಳು ಸಂಭವನೀಯವೂ ವಾಸ್ತವವೂ ಆಗಿದೆ ಆದರೆ ಪ್ರವಾದಿ (ﷺ)ರವರ ಕಾಲದ ನಂತರ ಇಂತಹಾ

12 ಶರಹು ಸ್ವಹಿಹುಲ್ ಮುಸ್ಲಿಂ–17/236

13 ಮಜ್ಮೂಅಲ್ ಫತಾವಾ –19/44

ಸಂಭವಗಳು ಆಗಿರುವುದೇ? ಇಲ್ಲವೇ ಎನ್ನುವುದು ಅತ್ಯಗತ್ಯವಾದ ವಿಷಯವಾಗಿರುತ್ತದೆ!. ಆದರೆ ಜಿನ್ನ್‌ನ್ನು ಮನುಷ್ಯನಿಗೆ ನೋಡಲು ಸಾದ್ಯವೋ ಎನ್ನುವುದರ ಬಗ್ಗೆ ಖುರ್ಆನ್ ಹೇಳಿರುವುದು ಅವುಗಳ ಯಾತಾರ್ಥ ರೂಪದಲ್ಲಿ ನೋಡಲು ಅಸಾದ್ಯವೆಂದು. ಹಾಗಾದರೆ ಅವುಗಳು ರೂಪಾಂತರ ಗೊಳ್ಳುತ್ತವೆಯೇ?. ಅದಕ್ಕೆ ಉತ್ತರವಾಗಿ ಈ ಮೇಲೆ ಓದಿದ ಹದೀಸುಗಳಿಂದ ಅವುಗಳು ರೂಪಾಂತರ ಗೊಳ್ಳುತ್ತವೆ ಎಂದು ಸ್ವಹೀಹಾದ ಹದೀಸುಗಳಿಂದ ಸಾಬೀತಾಗಿರುವುದಾಗಿದೆ ಹಾಗದರೆ ಮತ್ತೆಲ್ಲಿ ಗೊಂದಲಗಳಿರುವುದು.?

ಇದರ ಇನ್ನೊಂದು ಬದಿ ಜಿನ್ನಿನ ಸ್ವರೂಪ ಯಾರಾದರೂ ಕಂಡು ಇದುವರೆಗೆ ಹೇಳಿದ್ದಾಗ್ಯೂ ಬರೆದದ್ದಾಗ್ಯೂ ಕಂಡು ಬಂದಿಲ್ಲ ಹೊರತು ಕೆಲವು ಊಹಾ ಪೋಹಗಳಲ್ಲದೇ.

ಈ ವಿಷಯದ ಬಗ್ಗೆ ತಾಬಿಯೀನ್ ಮತ್ತು ಅಯಿಮ್ಮತುಲ್ ಮುಜ್ತಹಿದೀನ್, ಫುಖಹಾಅರ ಅಭಿಪ್ರಾಯಗಳೇನೆಂದು ನೋಡೋಣ.

"من زعم أنه رأى الجن فلا تقبل له شهادة إلا أن يكون نبياً"، فمن قال رأيت الجني الأزرق أو الأحمر فقد كذب، وإنما يكون إتيانهم في صورة بشر، وقد كان يوم بدر عندما تمثل إبليس في صورة رجل، وكما تمثل الشيطان في صورة رجل حين جاء لأبي هريرة كما في البخاري[14].

ಇಮಾಮ್ ಬೈಹಕೀ **'ಮನಾಖಿಬ್ ಶಾಫಿಯೀ'** ಯಲ್ಲಿ ರಬೀಅ ರವರ ಉಲ್ಲೇಖವನ್ನು ವರದಿ ಮಾಡುತ್ತಾರೆ ರಬೀಅ ರಹಿಮಹುಲ್ಲಾಹ್ ಹೇಳುತ್ತಾರೆ ನಾನು ಇಮಾಮ್ ಶಾಫಿಯೀ ಹೇಳುವುದಾಗಿ ಕೇಳಿರುವೆನು. ' ಯಾರಾದರೂ ಜಿನ್ನನ್ನು ನೋಡಿರುವೆನೆಂದರೆ ಅವನ ಸಾಕ್ಷಿಯು ಸ್ವೀಕರಿಸಲಾಗದು ನಬಿಯಾಗಿರದ ಹೊರತು.(ಅಂದರೆ ಅಂಬಿಯಾ ಅಲೈಹಿಸ್ಸಲಾಮರಿಗಲ್ಲದೇ ಜಿನ್ನ್ ಗಳನ್ನು ನೋಡಲು ಅಸಾದ್ಯವಾಗಿರುತ್ತದೆ) ಇನ್ಯಾರಾದರು ನೀಲಿ ಅಥವಾ

[14] ತಫ್ಸೀರುಲ್ ಮನಾರ್.–7/526

ಕೆಂಪು ಬನ್ನಗಳಲ್ಲಿ ಜಿನ್ನನ್ನು ನೋಡಿರುವೆನೆಂದರೆ ಅವನು ಸುಳ್ಳುಹೇಳಿದನು. ಬದರ್ ಯುದ್ಧದ ಕಾಲದಲ್ಲಿ ಇಬ್ಲೀಸನು ಮನುಷ್ಯರೂಪದಲ್ಲಾಗಿತ್ತು ರೂಪಾಂತರ ಗೊಂಡದ್ದು ಅಲ್ಲದೇ ಇಮಾಮ್ ಬುಖಾರಿ ಅಬೀ ಹುರ್ರೈರಾ (ರ) ರವರ ನೋಡಿದ ವಿಷಯವನ್ನು ಉದ್ಧರಿಸಿರುವುದು (ಪ್ರವಾದಿ ಸ. ರವರ ಕಾಲದಲ್ಲಿ ನೋಡಿರುವುದು) ಕಂಡಿತವಾಗಿಯೂ ಮನುಷ್ಯರೂಪದಲ್ಲಾಗಿದೆ

ಇಮಾಮ್ ಶಾಫಿಯೀ ಕದ್ದಸಲ್ಲಾಹು ರೂಹಹು ರವರು ಪ್ರವಾದಿ (ﷺ)ರವರ ಕಾಲದ ನಂತರ ಸರಾಸರಿ ಜಿನ್ನಿನ ಸ್ವರೂಪವನ್ನು ನೋಡುವುದರ ಬಗ್ಗೆಯಿರುವ ವಿಷಯವನ್ನು ನಿರಾಕರಿಸುತ್ತಾರೆ.

ಜಿನ್ನನ್ನು ನೋಡುವ ಬಗ್ಗೆ ಅಹ್ಲುಲ್ ಇಲ್ಮಿನ ವಕ್ತಾರರಲ್ಲಿ ಮೂರು ರೀತಿಯ ಅಭಿಪ್ರಾಯಗಳಿವೆ

1 رأي الجمهور: أن الجن يرون إذا تشكلوا في غير صورهم الأصلية، في بعض الأوقات، ولبعض الناس .

2 الفريق الثاني: يرى أن رؤية الجن مختصة بالأنبياء – عليهم السلام – فقط. وممن قال بذلك: الشافعي وابن حزم والنحاس والقشيري وبعض المحدثين .

3 الفريق الثالث: ينكر رؤية البشر للجن، سواء كانوا أنبياء أو غير أنبياء، وهو قول لبعض المحدثين .

4 الفريق الرابع: يتوسع في دائرة الرؤية، فيثبت رؤية الجن بصورهم الأصلية للأنبياء, ولمن اختصه الله بذلك من غير الأنبياء من البشر, وهو قول الألوسي, وابن العربي،

1. ಜುಂಹೂರ್(ಬಹುಪಕ್ಷ ಉಲಮಾಅ)ರ ಅಭಿಪ್ರಾಯದಂತೆ: ಕೆಲವು ಸಮಯಗಳಲ್ಲಿ ಕೆಲವರಿಗೆ ಮಾತ್ರ ಜಿನ್ನುಗಳನ್ನು ಅವರ ಸ್ವರೂಪವಲ್ಲದೇ ಇತರ ರೂಪಗಳಲ್ಲಿ ರೂಪಾಂತರ ಗೊಂಡರೆ ನೋಡಲು ಸಾದ್ಯ
2. ಎರಡನೇ ಅಭಿಪ್ರಾಯ ಕಾರರ ಅಭಿಪ್ರಾಯದಂತೆ: ಜಿನ್ನನ್ನು ಪ್ರತ್ಯೇಖವಾಗಿ ಅಂಬಿಯಾ (ಅ)ರವರಿಗೆ ಮಾತ್ರ ನೋಡಲು ಸಾದ್ಯ. ಅಂಬಿಯಾಅರಿಗಲ್ಲದೇ ಜಿನ್ನುಗಳನ್ನು ನೋಡಲು ಸಾದ್ಯವಿಲ್ಲ ಎನ್ನುವ ವಾದವನು ಇಮಾಮ್ ಶಾಫಿಯೀ ಮತ್ತು ಇಬ್ನುಲ್ ಹಝ್ಮ್, ನುಹಾಸ್ ಮತ್ತು ಕಶ್ಯರೀ ಹಾಗೂ ಕೆಲವು ಮುಹದ್ದಿಸರ ಅಭಿಪ್ರಾಯವಾಗಿರುತ್ತದೆ.
3. ಮೂರನೇ ಅಭಿಪ್ರಾಯ ಕಾರರ ಅಭಿಪ್ರಾಯದಂತೆ: ಅಂಬಿಯಾಅರಿಗಾಗಲಿ ಇತರರಿಗಾಗಲಿ ಜಿನ್ನನ್ನು ನೋಡಲು ಸಾದ್ಯವಿಲ್ಲ ಎನ್ನುವುದು ಕೆಲವು ಮುಹದ್ದಿಸರ ಅಭಿಪ್ರಾಯವಾಗಿರುತ್ತದೆ.
4. ನಾಲ್ಕನೇಯ ಅಭಿಪ್ರಾಯ ಕಾರರಂತೆ: ಜಿನ್ನನ್ನು ನೋಡುವ ಕಾರ್ಯಗಳಲ್ಲಿ ವಿಶಾಲವಾದುದು ಅಂಬಿಯಾಅರಿಗೂ ಇನ್ನು ಅಲ್ಲಾಹನು ಪ್ರತ್ಯೇಖಿಸಿದ ಅಂಬಿಯಾರಲ್ಲದ ಮನುಷ್ಯರಲ್ಲಿ ಕೆಲವರಿಗು ನೋಡಲು ಸಾದ್ಯ ಎನ್ನುವುದು ಆಲೂಸಿ ಮತ್ತು ಇಬ್ನುಲ್ ಅರಬಿ ಯವರದ್ದಾಗಿರುತ್ತದೆ.

## ಅಭಿಪ್ರಾಯ ಒಂದು:

ಒಂದನೇ ಅಭಿಪ್ರಾಯಕಾರರಲ್ಲಿ ಮೊಹಮ್ಮದ್ ರಷೀದ್ ರಿಳಾ ಹೇಳುತ್ತಾರೆ:

(والجمهور على أن الجن تتشكل[15])

ಜುಂಹೂರ್ (ಬಹುಪಕ್ಷ) ಅಭಿಪ್ರಾಯಗಳಂತೆ ಜಿನ್ನ್ ರೂಪಾಂತರ ಗೊಳ್ಳುತ್ತದೆ.

ಇಮಾಮ್ ಮೊಹಮ್ಮದ್ ಬಾಕಿರ್ ಅಲ್ ಮಜ್ಲಿಸೀ ಹೇಳುತ್ತಾರೆ:

15 ತಫ್ಸೀರುಲ್ ಮನಾರ್.–7/526

( لا خلاف بين المسلمين في أن الجن والشياطين أجسام لطيفة، يرون في بعض الأحيان، ولا يرون في بعضها.. وقد جعل الله لهم القدرة على التشكل بأشكال مختلفة وصور متنوعة، كما هو الأظهر من الأخبار والآثار[16] )

ಜಿನ್ನ್ ಮತ್ತು ಶ್ಯತಾನಿಗೆ ಉತ್ತಮ ದೇಹಗಳಿವೆ ಎನ್ನುವುದರ ಬಗ್ಗೆ ಮುಸ್ಲಿಮರಲ್ಲಿ ಅಭಿಪ್ರಾಯ ವೆತ್ಯಾಸಗಳಿಲ್ಲ. ಎಲ್ಲಾ ಘಳಿಗೆಯ ಹೊರತು ಕೆಲವು ಘಳಿಗೆಗಳಲ್ಲಿ ಪ್ರತ್ಯಕ್ಷಪಡುವವು. ಅಲ್ಲಾಹನು ಅವುಗಳಿಗೆ ನಾನಾ ರೂಪಗಳಲ್ಲಿ ವಿಭಿನ್ನ ಶೈಲಿಯಲ್ಲಿ ರೂಪಾಂತರ ಗೊಳ್ಳಲು ಶಕ್ತಿಗಳನ್ನು ನೀಡಿರುವನು ಕೆಲವು ವರದಿಗಳಲ್ಲಿ ಮತ್ತು ಆಸಾರುಗಳಲ್ಲಿ ನೋಡಿರುವಂತೆ.

ಮೊಹಮ್ಮದ್ ರಷೀದ್ ರಿಳಾ ಜಿನ್ನುಗಳನ್ನು ನೋಡುವ ವಿಷಯದಲ್ಲಿ ಹೇಳುತ್ತಾ ಬರೆಯುತ್ತಾರೆ:

(فإذا تمثل الملك أو الجان في صورة كثيفة كصورة البشر أو غيرهم، أمكن للبشر أن يروه، ولكنهم لا يرونه على صورته وخلقته الأصلية بحسب العادة، [17] )

"ಮಲಕೋ ಅಥವ ಜಿನ್ನೋ ಘನವಾದ ಮನುಷ್ಯರೂಪದಂತೆ ಅಥವಾ ಇತ್ಯಾದಿಗಳಂತೆ ರೂಪಾಂತರ ಗೊಂಡಾಗ ಅವುಗಳನ್ನು ವೀಕ್ಷಿಸಲು ಸಾದ್ಯ ಹೊರತು ಅವುಗಳ ಯಾತಾರ್ಥ ರೂಪದಲ್ಲಿ ಸಾಧಾರಣವಾಗಿ ನೋಡಲು ಸಾದ್ಯವಿಲ್ಲ."

---

[16] ಮುಹಮ್ಮದ್ ಬಾಕಿರ್ ಅಲ್ ಮಜ್ಲಿಸೀ ಉಲಮಾವು ಶಿಯಾ. (ಮರಣ 1037 ಹಿಜರಿ ಇಸ್ಫಹಾನ್ ಈರಾನ್)

[17] ತಫ್ಸೀರುಲ್ ಮನಾರ್.–7/526

ಸೂರತುಲ್ ಅರಾಫಿನ್ ಇಪ್ಪತ್ತೇಳನೇ ಆಯಾತ್ತಿನ ವಿವರಣೆಯಲ್ಲಿ ಇಮಾಮ್ ಶೌಖಾನೀ ರಹಿಮಹುಲ್ಲಾಹ್ ಹೇಳುತ್ತಾರೆ:

(وقد استدل جماعة من أهل العلم بهذه الآية على أن رؤية الشياطين غير ممكنة، وليس في الآية ما يدل على ذلك، وغاية ما فيها أنه – أي إبليس – يرانا من حيث لا نراه، وليس فيها أنا لا نراه أبداً، فإن انتفاء الرؤية منا له في وقت رؤيته لنا لا يستلزم انتفاءها مطلقاً[18])

ಅಹುಲುಲ್ ಇಲ್ಮಿನ ವಕ್ತಾರ ಒಂದು ಸಮೂಹವು ಈ ಆಯತ್ತಿನಿಂದ ಶ್ಯತಾನನ್ನು ನೋಡಲು ಅಸಾದ್ಯ ವೆಂದು ಪುರಾವೆಗಳನ್ನು ನೀಡಿರುವರು. ಘಾಡವಾಗಿ ನೋಡದೇ ಇರುವ ವಿಷಯದ ಬಗ್ಗೆ (ಅಂದರೆ ಶ್ಯತಾನನ್ನು ವೀಕ್ಷಿಸಲಾಗದು ಎನ್ನುವ ಬಗ್ಗೆ) ಈ ಆಯಾತ್ ಪುರಾವೆ ಅಲ್ಲ. ಅವನು ನೋಡುವ ಹಾಗೆ ಅವನ್ನನ್ನು ನೋಡಲು ಅಸಾದ್ಯ ಅಂದ ಮಾತ್ರಕ್ಕೆ ಎಂದೆಂದೂ ನಮಗೆ ನೋಡಲು ಅಸಾದ್ಯವೆಂದಲ್ಲ. ಅಗೋಚರವಾಗಿರುವಾಗ ನಾವವನನ್ನು ಆ ಸಮಯದಲ್ಲಿ ನೋಡಲು ಸಾದಾರಣವಾಗಿ ಸಾದ್ಯವಿಲ್ಲವೆಂದಗಿದೆ.

ಇಮಾಮ್ ಇಬ್ನು ಹಜರುಲ್ ಅಸ್ಕಲಾನಿ ಫತಹುಲ್‌ಬಾರಿಯಲ್ಲಿ ಹೇಳುತ್ತಾರೆ:

(إن الشيطان قد يتصور ببعض الصور، فتمكن رؤيته،)[19]

“ನಿಶ್ಚಯವಾಗಿಯೂ ಕೆಲವೊಮ್ಮೆ ಶ್ಯತಾನನು ಕೆಲವು ರೂಪಗಳಲ್ಲಿ ರೂಪಾಂತರ ಗೊಳ್ಳುವನು ಆವಾಗ ನೋಡಲು ಸಾದ್ಯವಾಗುವುದು”

ಖಾಳೀ ಅಬೂಬಕ್ಕರ್ ಬಾಕಿಲ್ಲಾನಿ(ಮರಣ ಹಿಜರಿ 402) ಹೇಳುತ್ತಾರೆ:

---

[18] ತಫ್ಸೀರ್ ಫತುಹುಲ್ ಕದೀರ್–2/197

[19] ಫತುಹುಲ್ ಬಾರಿ–4/489

(لسنا ننكر مع كون أصلهم النار أن الله تعالى يكثف أجسامهم ويغلظها ويخلق لهم أعراضاً تزيد على ما في النار، فيخرجون عن كونهم ناراً، ويخلق لهم صوراً وأشكالاً مختلفة[20] )

"ಅಗ್ನಿಯಿಂದ ಸೃಷ್ಟಿಸಿರುವುದನ್ನು ನಾವು ವಿರೋಧಿಸುತ್ತಿಲ್ಲ ಅಲ್ಲಾಹನು ಘನವಾದ ದೇಹ ಮತ್ತು ಗಡುತರವಾದ ರೀತಿಯಲ್ಲಿ ಅಗ್ನಿಯಿಂದ ತೀಕ್ಷ್ಣತೆ ಮೀರುವಂತೆ ಅವುಗಳನ್ನು ಸೃಷ್ಟಿಸಿರುವನು. ಅಗ್ನಿಯಿಂದ ಹೊರಬಂದಾಗ ವಿವಿಧ ರೂಪಗಳಲ್ಲಿ ರೂಪಾಂತರವಾಗಿ ನಿರ್ಮಾನಗೊಳ್ಳುತ್ತವೆ."

ಇಬ್ನುಲ್ ಫರಾಅ[21] ಜಿನ್ನಿನ ಶಕ್ತಿಯಿಂದ ವಿವಿಧ ರೂಪಗಳಿಗೆ ರೂಪಾಂತರ ಗೊಳ್ಳುವ ಸಾದ್ಯತೆಯು ಅವುಗಳ ಪ್ರತ್ಯೇಖತೆಗಳಲ್ಲಿರುವುದಲ್ಲ ಹೊರತು ಅಲ್ಲಾಹನು ದಯಪಾಲಿಸಿರುವಂತಹವುಗಳಿಂದಾಗಿದೆ ಎಂದು ಖಾಳಿ ಅಬೂ ಯಅಲ ಅಲ್ ಹಂಬಿಲಿಯವರು ಅಭಿಪ್ರಾಯವನ್ನು ಪರಿಗಣಿಸಿ ಹೇಳುವುದಾಗಿದೆ.

ನಿಶ್ಚಯವಾಗಿಯೂ ಜಿನ್ನುಗಳ ರೂಪಾಂತರಗೊಳ್ಳುವ ಸಾದ್ಯತೆಗಳು ಅಲ್ಲಾಹನು ಕಲಿಸಿಕೊಟ್ಟಿರುವ ಕಲಿಮಾತುಗಳಿಂದಾಗಿದೆ ಅಥವಾ ಅವರಿಗೆ ಕಲಿಸಿಕೊಟ್ಟ ಕೆಲವು ಪ್ರವರ್ತಿಗಳಿಂದಾಗಿದೆ, ಕಲಿಮಾತುಗಳನ್ನು ಹೇಳಿದರೆ ಅಥವಾ ಪ್ರವರ್ತಿಗಳನ್ನು ಮಾಡಿದ್ದಲ್ಲಿ ಅಂದರೆ ಆ ಕಲಿಮಾತನ್ನು ಹೇಳಿದಾಗ ಅಥವಾ ಕಲಿಸಿ ಕೊಟ್ಟಂತಹಾ ಪ್ರವರ್ತಿಗಳನ್ನು ಮಾಡಿದಾಗ ಅಲ್ಲಾಹನು ಜೀವಿಯ ಯಾವುದೇ ರೂಪದಲ್ಲಿ ರೂಪಾಂತರ ಗೊಳಿಸುತ್ತಾನೆ. ಎನ್ನುವ ನಿಟ್ಟಿನಲ್ಲಿ ಹೇಳುತ್ತಾರೆ:

(ولا قدرة للملائكة والشياطين على تغيير خلقهم والانتقال في الصور، وإنما يجوز أن يعلمه الله تعالى كلمات وضرباً من ضروب الأفعال، إذا فعله وتكلم به، نقله الله تعالى من صورة إلى صورة, فيقال إنه قادر على

---

[20] ಫತಾವಾ ಅಲ್ ಹದೀಸೀಯಃ –ಪುಟ:65

[21] ಅಬೂ ಯಅಲ ಅಲ್ ಹಂಬಲೀ. ಮರಣ 19 ರಮಝಾನ್ ಹಿಜರಿ 458 ರಾತ್ರಿ.

التصور والتمثيل، على معنى أنه قادر على قول إذا قاله أو فعله نقله الله تعالى من صورته إلى صورة أخرى بجري العادة، فأما أن يصور نفسه فذلك محال، لأن انتقالها من صورة إلى صورة، إنما يكون بنقض البنية وتفريق الأجزاء، فإذا انتقضت بطلت الحياة، واستحال وقوع الفعل من الجملة، فكيف تنقل نفسها؟. والذي روي أن إبليس تصور في صورة سراقة بن مالك، وأن جبريل تمثل في صورة دحية الكلبي، وقوله تعالى :**فَاتَّخَذَتْ مِن دُونِهِمْ حِجَابًا فَأَرْسَلْنَا إِلَيْهَا رُوحَنَا فَتَمَثَّلَ لَهَا بَشَرًا سَوِيًّا** ( مريم: 17 )محمول على ما ذكرنا، وهو أنه أقدره على قول قاله، نقله الله تعالى عن صورته إلى صورة أخرى[22])

ಮಲಾಯಿಕತ್ತರಿಗೋ ಜಿನ್ನ್‌ವರ್ಗಕ್ಕೋ ಸ್ವಶಕ್ತಿಯಿಂದ ಇನ್ನೊಂದು ಸೃಷ್ಟಿಯಂತಾಗಲೋ ರೂಪಾಂತರಗೊಳ್ಳಲೋ ಸಾಧ್ಯವಿಲ್ಲ ಹೊರತು ಅಲ್ಲಾಹನ ತಿಳುವಳಿಕೆಯಂತೆ ಒಂದು ಪ್ರವರ್ತಿಯನ್ನು ಉಪಯೋಗಿಸಿಕೊಂಡು ಅಥವಾ ಕಲಿಮಾತುಗಳನ್ನು ಹೇಳಿದಾಗ ಅಲ್ಲಾಹನು ಇನ್ನೊಂದು ರೂಪಕ್ಕೆ ರೂಪಾಂತರ ಗೊಳಿಸುವುದಾಗಿದೆ. ಆವಾಗ ಅವನು ಒಂದು ರೂಪದಿಂದ ಇನ್ನೊಂದು ರೂಪಕ್ಕೆ ರೂಪಾಂತರ ಗೊಳ್ಳುವುದು ಮತ್ತೊಂದು ಸ್ವರೂಪತಾಳಲು ಶಕ್ತನಾಗಿರುವನು ಎಂದು ಹೇಳಲ್ಪಡುವುದು. ಕಲಿಮಾತು ಹೇಳಿದಾಕ್ಷಣ ಅಥವಾ (ಕಲಿಸಿಕೊಟ್ಟ ಪ್ರವರ್ತಿಯಿಂದ) ಆ ಪವರ್ತಿಯನ್ನು ಮಾಡಿದಾಗ ಅಲ್ಲಾಹನು ಅವನನ್ನು ಒಂದು ರೂಪದಿಂದ ಇನ್ನೊಂದು ರೂಪಕ್ಕೆ ರೂಪಾಂತರ ಸಾಧಾರಣವಾಗಿ ಗೊಳಿಸುವನು ಎಂದರ್ಥ. ಹೀಗಿರುವಾಗ ಶ್ಯತಾನನು ಸ್ವತಃ ರೂಪಾಂತರ ಗೊಳ್ಳುತ್ತಾನೆ ಎನ್ನುವುದು ಸಾಧ್ಯವಿಲ್ಲದ್ದಾಗಿದೆ. ಸ್ವತಃ ಒಂದು ರೂಪದಿಂದ ಇನ್ನೊಂದು ರೂಪಕ್ಕೆ ರೂಪಾಂತರ ಗೊಳ್ಳುವುದು

[22] ಅಲ್ ಮುಅತಮಿದ್ ಫೀ ಉಸೂಲಿದ್ದೀನ್–ಪುಟ:174

ಸೃಷ್ಟಿಗಳನ್ನು ಸೃಷ್ಟಿಸುವಲ್ಲಿ ಏನೋ ಕೊರತೆ ಸಂಭವಿಸಿರುತ್ತದೆ ಎನ್ನುವುದು ಹಾಗೆ ರೂಪಾಂತರ ಗೊಂಡರೆ ಅಲ್ಲಿ ಜೀವನವು ಕೊನೆಯಾಗುವುದು. ಮೊತ್ತದಲ್ಲಿ ಈ ರೀತಿ ಸಂಭವವಾಗುವಾಗ ಮತ್ತು ಹೇಗೆ ಒಂದು ರೂಪದಿಂದ ಇನ್ನೊಂದು ರೂಪಕ್ಕೆ ರೂಪಾಂತರ ಗೊಳ್ಳುವುದು?. ಇಬ್ಲೀಸನು ಸುರಾಖತ ಇಬ್ನ್ ಮಾಲಿಕನ ರೂಪ ತಾಳಿ ಬದರ್ ಯುದ್ಧದ ಸಂದರ್ಭದಲ್ಲಿ ಬಂದಿರುವುದೂ, ಜಿಬ್ರೀಲ್ (ಅ) ದಹಿಯತುಲ್ ಕಲ್ಬೀಯವರ ರೂಪ ತಾಳಿರುವುದು ಹಾಗೆಯೇ ಆಗಿರುತ್ತದೆ.

ಅಲ್ಲಾಹನು ಹೇಳುತ್ತಾನೆ:

ಆಕೆ(ಮರಿಯಮ) ತನ್ನನ್ನು ಅವರಿಂದ ಮರೆಯಾಗಿಟ್ಟಿದ್ದರು. ನಾವು ಆಕೆಯ ಬಳಿಗೆ ಒಬ್ಬ ರೂಹ್ ಅನ್ನು (ವಿಶೇಷ ಮಲಕನ್ನು) ಕಳಿಸಿದೆವು. ಅವನು ಒಬ್ಬ ಪರಿಪೂರ್ಣ ಮಾನವನ ರೂಪದಲಿ ಆಕೆಯ ಮುಂದೆ ಕಾಣಿಸಿಕೊಂಡನು. (ಸೂರಃ ಮರಿಯಮ್ –17)

ನಾವು ಹೇಳಿದ ಮಾತಿಗೆ ಹೊಲುವಂತಹದು, ಅಲ್ಲಾಹನು ಕಲಿಸಿಕೊಟ್ಟಂತಹಾ ಕಲಿಮತ್ತೋ ಪ್ರವರ್ತಿಯೋ ಉಂಟಾದಾಗ ಅಲ್ಲಾಹನು ಅವರನ್ನು ರೂಪಾಂತರ ಗೊಳಿಸುವನು.

## ಅಭಿಪ್ರಾಯ ಎರಡು:

ಎರಡನೇ ಅಭಿಪ್ರಾಯ ಕಾರರ ಅಭಿಪ್ರಾಯದಂತೆ: ಜಿನ್ನನ್ನು ಪ್ರತ್ಯೇಖವಾಗಿ ಅಂಬಿಯಾ (ಅ)ರವರಿಗೆ ಮಾತ್ರ ನೋಡಲು ಸಾದ್ಯ. ಅಂಬಿಯಾಅರಿಗಲ್ಲದೇ ಜಿನ್ನುಗಳನ್ನು ನೋಡಲು ಸಾದ್ಯವಿಲ್ಲ ಎನ್ನುವ ವಾದವನು ಇಮಾಮ್ ಶಾಫಿಯೀ ಮತ್ತು ಇಬ್ನುಲ್ ಹಝುಮ್, ನುಹಾಸ್ ಮತ್ತು ಕಶ್ಯರೀ ಹಾಗೂ ಕೆಲವು ಮುಹದ್ದಿಸರ ಅಭಿಪ್ರಾಯವಾಗಿರುತ್ತದೆ. ಅಲ್ಲಾಹನು ಹೇಳುತ್ತಾನೆ:

فَسَخَّرْنَا لَهُ الرِّيحَ تَجْرِي بِأَمْرِهِ رُخَاء حَيْثُ أَصَابَ وَالشَّيَاطِينَ كُلَّ بَنَّاء وَغَوَّاصٍ وَآخَرِينَ مُقَرَّنِينَ فِي الأَصْفَادِ هَذَا عَطَاؤُنَا فَامْنُنْ أَوْ أَمْسِكْ بِغَيْرِ حِسَابٍ ] ص: 36 – 39

]فالجن كانوا مرئيين وظاهرين لسليمان عليه السلام بمعجزة. وكما نعلم أن المعجزة أمر خارق للعادة، وأمر تجري حوادثه خلافاً للأمور التي تجرى تبعاً للسنن الكونية [23]

"ಹೀಗೆ ನಾವು ಗಾಳಿಯನ್ನು ಅವರಿಗೆ ವಿಧೇಯಗೊಳಿಸಿದೆವು. ಅದು ಅವರ ಆದೇಶದಂತೆ, ಅವರು ಬಯಸುವಲ್ಲಿಗೆ ನಿಧಾನವಾಗಿ ಚಲಿಸುತ್ತಿತ್ತು."

"ಕಟ್ಟಡಗಳನ್ನು ಕಟ್ಟುವ ಹಾಗೂ ನೀರಿನ ಆಳಕ್ಕಿಳಿಯುವ ಶೈತಾನರನ್ನು(ವಿದ್ರೋಹಿ ಜಿನ್ನ್ ಗಳನ್ನು)."

"ಮತ್ತು ಸರಪಣಿಗಳಲ್ಲಿ ಬಂಧಿತವಾಗಿದ್ದ ಇತರ ಕೆಲವು ಜೀವಿಗಳನ್ನು (ಅವರಿಗೆ ವಿಧೇಯಗೊಳಿಸಲಾಗಿತ್ತು)."

"ಇದು ನಮ್ಮ ಕೊಡುಗೆ(ಇದರಿಂದ) ಇತರರಿಗೆ ಕೊಡಿರಿ ಅಥವಾ ಎಣಿಕೆ ಮಾಡದೆ ನೀವೇ ಇಟ್ಟು ಕೊಳ್ಳಿರಿ." ಸೂರಃ ಸ್ವಾದ್–36–39.

ಜಿನ್ನ್ ಗಳು ಸುಲೈಮಾನ್ ಅಲೈಹಿಸ್ಸಲಾಮರಿಗೆ ಪ್ರತ್ಯಕ್ಷವಾಗಿ ತೋರಲ್ಪಡುತ್ತಿತ್ತು ಅವರ ಮುಅಜಿಝುತ್ತಿನಿಂದ. ಅಸಾಧಾರಣವಾಗಿ ಇರುವಂತಹಾ ಒಂದು ವಿಶಯವಾಗಿದೆ ಮುಅಜಿಝುತ್ ಎಂದು ನಾವು ತಿಳಿದಿದ್ದೇವೆ. ಅಲ್ಲಾಹನ ರೀತಿ ನೀತಿಗಳ ವಿರುದ್ಧವಾಗಿ ಏನಾದರೂ ಸಂಭವಿಸಿದ್ದಲ್ಲಿ ಅಂಬಿಯಾಅರಿಂದ ಅಲ್ಲಾಹನ ಇಜಾಝುತ್ (ಆಜ್ಞೆ) ಉಂಟಾಗುವುದು.

وكما حدث للرسول محمد عليه الصلاة والسلام من رؤيته للجن في مواضع كثيرة، ... ومجيء الشيطان إليه بشعلة من نار ليحرق بها وجهه، فقال له: ألعنك بلعنة الله ثلاثاً، ولولا دعوة أخيه سليمان عليه لأخذه وربطه في سارية من سواري المسجد، حتى يلعب به ولدان أهل المدينة.

[23] ಸಅಲೂನೀ–1/250

وغير ذلك من الأحاديث التي تثبت رؤية الرسول عليه الصلاة والسلام للجـــــــــن ... .

فالبشر لا يرون الجن عند هذا الفريق إلا أن يكون ذلك نبياً، فقد كان الإمام الشافعي رحمه الله يرى أن رؤيتهم من الخوارق الخاصة بالأنبياء

وقول الإمام الشافعي المتقدم محمول على رؤيتهم بصورتهم الأصلية كما مـــــــــــــــــــــــــر معنـــــــــــــــــــــــــا .

وبمثل قول الشافعي قال النحاس. ففي تفسير قوله تعالى :**إِنَّهُ يَرَاكُمْ هُوَ وَقَبِيلُهُ مِنْ حَيْثُ لاَ تَرَوْنَهُمْ إِنَّا جَعَلْنَا الشَّيَاطِينَ أَوْلِيَاء لِلَّذِينَ لاَ يُؤْمِنُونَ** ] الأعراف: 27 ... ]

ಅದೇ ರೀತಿ ಪ್ರವಾದಿ(ಸ) ರವರಿಗೆ ಬಹಳಷ್ಟು ಸ್ಥಳಗಳಲ್ಲಿ ಜಿನ್ನ್ ಗಳನ್ನು ನೋಡುವ ಸನ್ನಿವೇಶ ಬಂದಿರುವುದು ಹದೀಸುಗಳಿಂದ ವ್ಯಕ್ತವಾಗುತ್ತದೆ. ಒಮ್ಮೆ **ಪ್ರವಾದಿಯ (ಸ) ರವರ ಮುಖವನ್ನು ಸುಡಲೆಂದು ಅಗ್ನಿಯ ಜ್ವಾಲೆಯನ್ನು** ತಂದಿರುವುದು ಅವಾಗ ಪ್ರವಾದಿ(ಸ)ರವರು ಹೇಳಿರುವುದು:

أَلْعَنُكَ بِلَعْنَةِ اللَّهِ التَّامَّةِ فَلَمْ يَسْتَأْخِرْ ثَلاَثَ مَرَّاتٍ ثُمَّ أَرَدْتُ أَخْذَهُ وَاللَّهِ لَوْلاَ دَعْوَةُ أَخِينَا سُلَيْمَانَ لأَصْبَحَ مُوثَقًا يَلْعَبُ بِهِ وِلْدَانُ أَهْلِ الْمَدِينَةِ.[24]

“ಅಲ್ಲಾಹನ ಶಾಪದೊಂದಿಗೆ ನಾನು ನಿನಗೆ ಶಪಿಸುವೆನು ಎಂದು ನಿರಂತರವಾಗಿ ಮೂರು ಬಾರಿ ಹೇಳಿದ ನಂತರ ಸುಲೈಮಾನ್ ಅಲೈಹಿಸ್ಸಲಾಮರು ಕರೆ ಇಲ್ಲದಿರುತ್ತಿದ್ದರೆ ಅಲ್ಲಾಹನಾಣೆ (ಗೋಡೆಯ ಬಳಿ)ಕಟ್ಟಿ

[24] ಸ್ವಹೀಹುಲ್ ಮುಸ್ಲಿಂ –542

ಹಾಕುತಿದ್ದೆ ಮದೀನ ಮುನವ್ವರದ ಮಕ್ಕಳು ನಿನ್ನ ಮೇಲೆ ಬೆಳಿಗ್ಗೆಯ ವರೆಗೆ ಪ್ರಮಾಣಿಕವಾಗಿ ಆಟವಾಡುತ್ತಿರುತಿದ್ದರು (ಬಾರಿಸುತಿರುತಿದ್ದರು)".

ಮನುಷ್ಯನು ಜಿನ್ನುಗಳನ್ನು ನೋಡಲಾರನು ಪ್ರವಾದಿ(ಅ) ರವರಲ್ಲದೇ. ಇಮಾಮ್ ಶಾಫಿಯೀ ರಹಿಮಹುಲ್ಲಾಹ್ ಅಂಬಿಯಾಅರ ಮುಅಜಿಝುತ್ತಿ ನಿಂದಲ್ಲದೇ ಜಿನ್ನನ್ನು ನೋಡಲು ಸಾದ್ಯವಿಲ್ಲ ಎನ್ನುವ ವಾದದರಾಗಿದ್ದರು.

ಇಮಾಮ್ ಶಾಫಿಯವರಂತೆ ನುಹ್ಹಾಸ್ ರಹಿಮಹುಲ್ಲಾಹ್ ರು ಅದೇವಾದವರಾಗಿದ್ದರೆಂದು ತಪ್ಸೀರುಗಳಲ್ಲಿ ನೋಡಲು ಸಾದ್ಯವಾಗುತ್ತದೆ. ಇಮಾಮ್ ಕುರ್ತುಬೀ ಇಮಾಮ್ ನುಹ್ಹಾಸ ಹೇಳಿರುವುದನ್ನು ಈ ಆಯತ್ತಿನ ಆಡಿಯಲ್ಲಿ ನಕಲುಮಾಡಿರುವರು: 'ಮಿನ್ ಹ್ಯಸು ಲಾತರವುನಹುಮ್' ಎನ್ನುವಲ್ಲಿ ಹೇಳುತ್ತಾರೆ:

(أن الجن لا يرون إلا في وقت نبي، ليكون ذلك دلالة على نبوته، لأن الله جل وعز خلقهم خلقاً لا يرون فيه، وإنما يرون إذا نقلوا عن صورهم، وذلك من المعجزات التي لا تكون إلا في وقت الأنبياء صلوات الله وسلامه عليهم)[25]

ಜಿನ್ನ್ ಗಳನ್ನು ಪ್ರವಾದಿ (ಅ) ರವರ ಕಾಲಗಳಲ್ಲಲ್ಲದೇ ನೋಡಲು ಅಸಾದ್ಯ ಅದು ನುಬುವ್ವತ್ತಿನ(ಪ್ರವಾದಿತ್ವದ) ಪುರಾವೆಗಳಾಗುವುದಕ್ಕಾಗಿದೆ. ನೋಡಲು ಅಸಾದ್ಯವಾದ ಸ್ಥಿತಿಯಲ್ಲಾಗಿದೆ ಅಲ್ಲಾಹನು ಅವರನ್ನು ಸೃಷ್ಟಿಸಿರುವುದು. ಅವರು ಇತರ ರೂಪಗಳಿಗೆ ರೂಪಾಂತರಗೊಂಡಾಗ ಮಾತ್ರವೇ ನೋಡಲು ಸಾದ್ಯ ಅದು ಮುಅಜಿಝುತಿನಿಂದಾಗಿದೆ ಮಾತ್ರವಲ್ಲದೇ ಪ್ರವಾದಿಗಳ( ಅಲ್ಲಾಹನ ಶಾಂತಿ ಮತ್ತು ಅನುಗ್ರಹ ಅವರ ಮೇಲಿರಲಿ) ಕಾಲದಲ್ಲಲ್ಲದೇ ನೋಡಲೂ ಸಾದ್ಯವಿಲ್ಲ.

[25] ತಫ್ಸೀರು ತಬ್ರೀ–7/186

ಅಲ್ಲಾಮ ಕಶ್ಯರೀ[26] ರಹಿಮಹುಲ್ಲಾಹ್ ಹೇಳುತ್ತಾರೆ:

( أجرى الله العادة بأن بني آدم لا يرون الشياطين اليوم)[27]

"ಅಲ್ಲಾಹನು ಇಂದು ನಡೆಸುತ್ತಿರುವ ರೀತಿಗಳಲ್ಲೊಂದಾಗಿದೆ. ನಿಶ್ಚಯವಾಗಿಯೂ ಆದಮನ ಸಂತತಿ ಶೈತಾನನ್ನು ಇಂದಿನ ದಿವಸಗಳಲ್ಲಿ ನೋಡಲು ಸಾದ್ಯವಿಲ್ಲವಾದುದಾಗಿರುವುದು."

ಇಮಾಮ್ ಇಬ್ನ್ ಹಝ್ಮ್ ಅಳ್ವಾಹಿರೀ[28] ಹೇಳುತ್ತಾರೆ:

(وهم يروننا ولا نراهم، قال الله تعالى :**إِنَّهُ يَرَاكُمْ هُوَ وَقَبِيلُهُ مِنْ حَيْثُ لاَ تَرَوْنَهُمْ إِنَّا جَعَلْنَا الشَّيَاطِينَ أَوْلِيَاء لِلَّذِينَ لاَ يُؤْمِنُونَ** [ الأعراف: 27 ]..وإذ أخبرنا الله عز وجل أنا لا نراهم، فمن ادعى أنه يراهم أو رآهم فهو كاذب، إلا أن يكون نبياً من الأنبياء عليهم السلام، فذلك معجزة لهم، كما نص النبي صلى الله عليه وسلم( :أنه تفلت عليه الشيطان ليقطع عليه صلاته ).. يقول: (ولا سبيل إلى وجود خبر يصح

---

26 ಅಬ್ದುಲ್ ಕರೀಮ್ ಬಿನ್ ಹೌಝಾನ್ ಬಿನ್ ಅಬ್ದುಲ್ ಮಲಿಕ್ ಬಿನ್ ತ್ವಲ್ಹಾ ಅಬುಲ್ ಕಾಸಿಮ್ ಅಲ್ ಕಶ್ಯರೀ. ಅಲ್ಲಾಮ ಸೂಫಿ ಆಶಅರೀ, ಶಾಫಿಯೀ – ಝ್ಯನುಲ್ ಇಸ್ಲಾಮ್ ಎಂದು ಕರೆಯುತ್ತಿದ್ದರು. ಮರಣ ಹಿಜರಿ: 465.

27 ತಫ್ಸೀರು ತಬ್ರೀ–7/186

28 ಅಬೂ ಮಹಮ್ಮದ್ ಅಲೀ ಬಿನ್ ಹಝ್ಮ್ ಅಂದುಲುಸೀ ಅಳ್ವಾಹಿರೀ. ಇಮಾಮ್ ತ್ವಬರೀಯ ನಂತರ ಹೆಸರಾಂತ ಇಮಾಮುಗಳಲ್ಲೊಬ್ಬರು ಇವರು ಅಶ್ಅರೀ, ಮಾತುರಿದೀ, ಅಖೀದಗಳಲ್ಲಿದವರಾಗಿದ್ದರು. ಮಾಲಿಕೀ, ಶಾಫಿಯೀ ನಂತರ ಳ್ವಾಹಿರೀ ಮಝ್ಹಬನ್ನು ಮುಂದುವರಿಸಿದರು. ಇವರ ಅನುಸರಿಸಿದವರಲ್ಲಿ ಕೆಲವರು ಇಬ್ನು ಅಬ್ದುಲ್ ಬರ್ರ್, ದಾವೂದ್ ಇಬ್ನ್ ಅಲೀ ಅಲ್ ಇಸ್ಫಹಾನೀ, ಹುಮ್ಯದೀ, ಝಹಬೀ, ಇಬ್ನ್ತೀಮೀಯಃ, ಇಬ್ನುಲ್ ಕಯ್ಯೂಂ, ಶೌಕಾನೀ, ಇತರರು. ಮರಣ ಹಿಜರಿ:456.

برؤية جني بعد موت رسول الله صلى الله عليه وسلم، وإنما هي منقطعات أو عمن لا خير فيه.[29] )

ಅವರು ನಮ್ಮನ್ನು ನೋಡುತ್ತಿರುವ ಹಾಗೆ ನಮಗವರನ್ನು ನೋಡಲು ಅಸಾದ್ಯ ಅಲ್ಲಾಹನು ಹೇಳುತ್ತಾನೆ: "ಖಂಡಿತವಾಗಿಯೂ ನೀವು ಅವರನ್ನು ನೋಡಲಸಾದ್ಯವಾದಂತಹ ವಿಧದಲ್ಲಿ ಅವನು ಮತ್ತು ಅವನ ಪಂಗಡದವರು ನಿಮ್ಮನ್ನು ನೋಡುತ್ತಿರುವರು" ಅಲ್ಲಾಹನು ಇಲ್ಲಿ ಹೇಳಿದಂತೆ ನಾವವರನ್ನು ನೋಡಲಾಸಾದ್ಯವಾಗಿದೆ. ಇನ್ನ್ಯಾರಾದರೂ ನಾನು ನೋಡಿರುವೆನೆಂದೋ ಅಥವಾ ತೋರಲ್ಪಟ್ಟಿರುವುದೆಂದೋ ವಾದಿಸುವುದಾದರೆ ಅವನು ಸುಳ್ಳನಾಗಿರುವನು. ಒಂದೋ ಪ್ರವಾದಿಗಳಲ್ಲಿರುವ ಪ್ರವಾದಿಯಾಗಿರ ಬೇಕು ಅದು ಅವರಿಗೆ ದೊರಕಿದ ಮುಅಜಿಝುತ್ ಆಗಿರುತ್ತದೆ. ಪ್ರವಾದಿ (ﷺ)ರವರಿಂದ ಸಾಬೀತಾದಂತೆ –ಆಕಸ್ಮಿಕವಾಗಿ ಪ್ರವಾದಿ (ﷺ)ರವರ ನಮಾಝುನ್ನು ಮುರಿಯಲು ಶೈತಾನನು ಹಾಜರಾದಂತೆ.. ಇನ್ನು ಅವರು ಹೇಳುತ್ತಾರೆ " ಪ್ರವಾದಿ(ﷺ)ರವರ ಕಾಲದ ನಂತರ ಜಿನ್ನನ್ನು ನೋಡಿರುವುದಾಗಿ ಸ್ವಹೀಹ್ ಆಗಿ ಯಾವುದೇ ಸಂದೇಶ ಲಭಿಸಲು ಮಾರ್ಗವೇ ಇಲ್ಲ ಹೊರತು ಸ್ವೀಕಾರರ್ಹವಲ್ಲದ ಅಥವಾ ಯಾವುದೇ ಒಳಿತಿಲ್ಲದ ವಾರ್ತೆಇಂದಲ್ಲದೇ.

ಉಮರ್ (ರ) ರವರು ಜಿನ್ನನ್ನು ನೋಡಿರುವ ವಿಶಯದಲ್ಲಿ ಬಂದಿರುವ ವರದಿಯ ಬಗ್ಗೆ:

وروي عن الخليفة عمر بن الخطاب رضي الله عنه أن رؤية الجن ليست حقيقة، وإنما هي من باب التخييل[30]

---

[29] 'ಅಲ್ ಫಸ್ಲು ಫಿಲ್ ಮಲಲಿ ವಲ್ಅಹ್ವಾಯಿ ಅನ್ನಹಲೀ' –5/13

[30] 'ಅಲ್ಮೌಸೂಅ ಅಲ್ಅಕದೀಯ ಅದುರರು ಸುನ್ನಿಯಃ' –8/349

ಖಲೀಫಾ ಉಮರ್(ರ)ರವರು ಜಿನ್ನನ್ನು ನೋಡಿರುವವರೆಂದು ವರದಿಯಾಗಿರುವು ಅದು ವಾಸ್ತವದಲ್ಲಲ್ಲ! ನಿಶ್ಚಯವಾಗಿಯೂ ಅದು ಕಾಲ್ಪನಿಕವಾಗಿತ್ತು.

(**عن أسير بن عمرو قال**) :ذكرنا عند عمر الغيلان(،**= أي أنواع الجن= فقال**) :إنه لا يستطيع شيء أن يتحول عن خلق الله الذي خلقه، ولكن فيهم سحرة كسحرتكم، فإذا أحسستم من ذلك شيئا فأذنوا)[31]

ಅಸೀರ್ ಇಬ್ನ್ ಅಂರೂ ಹೇಳುತ್ತಾರೆ: ಉಮರುಲ್ ಘೀಲಾನಿ ಯವರ ಬಳಿ(ಜಿನ್ನಿನ ವಿಶಯದ ಬಗ್ಗೆ ಮಾತನಾಡುತ್ತಾ ಅವರು ಹೇಳಿದರು. " ನಿಶ್ಚಯವಾಗಿಯೂ ಅಲ್ಲಾಹನ ಸೃಷ್ಟಿಗಳಲ್ಲಿರು ಸೃಷ್ಟಿಗಳಾಗಿ ರೂಪಾಂತರ ಗೊಳ್ಳಲು ಅವುಗಳಿಗೆ ಸಾದ್ಯವಿಲ್ಲ. ನೀವು ಮಾಡುವ ಮೋಡಿಯಂತೆ ಅವರಲ್ಲಿರುವ ಮೋಡಿಯಿಂದಲ್ಲದೇ. ಹಾಗೆಲ್ಲಾದರೂ ನಿಮ್ಮ ಮುಂದೆ ಸಂಭವಿಸಿದ್ದಲ್ಲಿ ಅವಾಗ ನೀವು ಆಝಾನ್(ಬಾಂಗ್) ನೀಡಿರಿ.(ಅದು ಅಲ್ಲಿಂದ ಅದಕ್ಕೆ ವ್ಯೆತಿರಿಕ್ತವಾಗಲು ಸಾಕಾಗುವುದು)

ಉಮರ್(ರ)ರವರ ಮಾತಿನ ಮೇಲಿರುವ ವಿಷಯ ಕಾಲ್ಪನಿಕವಾದರೂ ಅಬೀ ಹುರ್ರೈರಾರೊಂದಿಗೆ ಸಂಭವಿಸಿರುವ ರಮಝಾನಿನ ತಿಂಗಳಲ್ಲಿ ಮನುಷ್ಯನ ರೂಪದಲ್ಲಿ ಶೈತಾನನು ಕಡುಬಡವನಾಗಿ ಬಂದಿರುವುದು ಸ್ವಹೀಹಾದ ಹದೀಸಿನಿಂದ ಸಾಬೀತಾದ ವಿಷಯವಾಗಿರುತ್ತದೆ ಅಲ್ಲದೇ ಇತರ ಹದೀಸುಗಳಲ್ಲಿಯೂ ಪ್ರತ್ಯಕ್ಷವಾಗಿ ಮನುಷ್ಯರೂಪದಲ್ಲಿ ಕಂಡಿರುವುದಾಗಿ ಸಾಬೀತಾಗಿರುತ್ತದೆ.

## ಅಭಿಪ್ರಾಯ ಮೂರು:

---

[31] ಮುಸನ್ನಿಫ್ ಅಬ್ದುಲ್ ರಝ್ಝಾಕ್–5/162, ಇಬ್ನ್ ಅಬೀ ಶೈಬಾ–6/94, ಫತಹುಲ್ ಬಾರಿ–5,6/396 ಸ್ವಹೀಹಾದ ಶೃಂಖಲೆಯಿಂದ.

ಮೂರನೇ ಅಭಿಪ್ರಾಯ ಕಾರರ ಅಭಿಪ್ರಾಯದಂತೆ: ಅಂಬಿಯಾಅರಿಗಾಗಲಿ ಇತರರಿಗಾಗಲಿ ಜಿನ್ನನ್ನು ನೋಡಲು ಸಾದ್ಯವಿಲ್ಲ ಎನ್ನುವುದು ಕೆಲವು ಮುಹದ್ದಿಸರ ಅಭಿಪ್ರಾಯವಾಗಿರುತ್ತದೆ.

ಅಲ್ಲಾಮ ಅಬ್ದುಲ್ಲಾ ನೂರಿ[32] ಒಂದು(ಪ್ರವಾದಿ(ಸ)ರವರು ಜಿನ್ನನ್ನು ನೋಡಿರುವರೇ ಎನ್ನುವ) ಪ್ರಶ್ನೆಗೆ ಉತ್ತರಿಸುವಾಗ ಹೇಳುತ್ತಾರೆ:

(لم يثبت أن النبي صلى الله عليه وسلم رأى الجن بعينيه، وإنما أوحي إليه أن نفراً من الجن استمع إليه، قال تعالى: **قُلْ أُوحِيَ إِلَيَّ أَنَّهُ اسْتَمَعَ نَفَرٌ مِّنَ الْجِنِّ فَقَالُوا إِنَّا سَمِعْنَا قُرْآنًا عَجَبًا** [ الجن: 1 ]). وهو لا يثبت الرؤية إلا للنبي سليمان عليه السلام، كما ورد في الآيات التي تبين تسخير الجن له[33]) .

ಪ್ರವಾದಿ(ಸ)ರವರಿಂದ ಜಿನ್ನನ್ನು ಪ್ರತ್ಯಕ್ಷ ನೇತ್ರದರ್ಶಣ ಮಾಡಿರುವರೆಂದು ಎಲ್ಲಿಯೂ ಸಾಬೀತಾಗಿ ಬಂದಿಲ್ಲ ಹೊರತು ಒಬ್ಬ ಜಿನ್ನ್ ತಾವು ಓದುತ್ತಿರುವ ಖುರ್ಆನ್ ಆಲಿಸುತ್ತಿದೆ ಎಂದು ಅವರ ಮೇಲೆ ದಿವ್ಯವಾಣಿಯನ್ನು ಅವತೀರ್ಣಿಸಲಾಯಿತು. ಅಲ್ಲಾಹನು ಹೇಳುತ್ತಾನೆ: " ಓ ಸಂದೇಶವಾಹಕರೇ! ಹೇಳಿರಿ; ನನ್ನ ಬಳಿಗೆ ದಿವ್ಯವಾಣಿಯೂ ಬಂದಿರುತ್ತದೆ.(ಅದರಂತೆ) ಜಿನ್ನ್‌ಗಳ ಒಂದು ಸಮೂಹವೂ ಅದನ್ನು(ಖುರ್ಆನನ್ನು) ಆಲಿಸತ್ತಾ ಹೀಗೆಂದಿತು;" " ನಾವು ಒಂದು ಆಶ್ಚರ್ಯಕರವಾದ ಪಠಣವ(ಖುರ್ಆನ)ನ್ನು ಕೇಳಿರುವೆನು". (ಸೂರಃ ಅಲ್ ಜಿನ್ನ್:-1) ಈ ಆಯಾತುಗಳಿಂದ ಪ್ರವಾದಿ ಸುಲೈಮಾನರಲ್ಲದೇ ಬೇರೆ ಯಾರು ವೀಕ್ಷಿಸಲಿಲ್ಲವೆಂದು ಸಾಬೀತಾಗುತ್ತಿದೆ.

ಹೀಗಿರುವಾಗ ಈ ಮೇಲೆ ಹೇಳಿರುವ ಆಯಾತುಗಳಿಂದ ಮನದಟ್ಟಾಗುವುದೇನೆಂದರೆ ಪ್ರವಾದಿ(ﷺ)ರವರು ಜಿನ್ನನ್ನು ಪ್ರತ್ಯಕ್ಷವಾಗಿ

---

[32] ಅಬ್ದುಲ್ಲಾ ಬಿನ್ ಶೈಖ್ ಮಹಮ್ಮದ್ ನೂರೀ, ಕುವೈತಿನಲ್ಲಿ ಬಹಳಷ್ಟು ಹೆಸರುವಾಸಿಯಾದ ಆಲಿಮಾಗಿದ್ದರು ಅವರ ಜನನ: ಮಂಗಳವಾರ, ರಬೀಯುಲ್ ಅವ್ವಲ್ ಹಿಜರಿ: 1323.

[33] 'ಅಲ್‌ಮೌಸೂಅ ಅಲ್‌ಅಕದೀಯ ಅದುರರು ಸುನ್ನಿಯಃ' –8/350

ವೀಕ್ಷಿಸಲಿಲ್ಲ ಹೊರತು ಅವರಿಗೆ ಅಲ್ಲಾಹನ ಕಡೆಯಿಂದ ದಿವ್ಯವಾಣಿಯ ಮೂಲಕ ತಿಳಿಸಿಕೊಡಲಾಗಿತ್ತು ಇದೇ ರೀತಿ ಬಹಳಷ್ಟು ಸಲ ಪ್ರವಾದಿ(ﷺ)ರವರಿಗೆ ಜಿನ್ನಗಳ ಬಗ್ಗೆ ಅಲ್ಲಾಹನ ಕಡೆಯಿಂದ ತಿಳಿಸಲಾಗಿತ್ತು. ಬಹಿಯ ಅಲ್ ಖೌಲೀ[34] ಹೇಳುತ್ತಾರೆ:

(وإذا كان ذلك التسخير خصوصية لا تنبغي لأحد بعد سليمان فإن سر تلك الخصوصية لم ينقطع بعده[35])

"ಆವಾಗ(ಸುಲ್ಯಮಾನ್ ಅಲ್ಯಹಿಸ್ಸಲಾಮ್ ರಿಗೆ) ನೀಡಿದ ಗೌಪ್ಯತೆ ಮತು ರಹಸ್ಯ ನಂತರವಿರುವ ಯಾವೊಬ್ಬರಿಗೂ ನೀಡುವಂತಹದ್ದಲ್ಲ. ಆ ಗೌಪ್ಯತೆ ಮತ್ತು ರಹಸ್ಯ ಅವರ ನಂತರವೂ ನಿಂತಿರಲಿಲ್ಲ." ಪ್ರತ್ಯೇಖತೆಯ ಬಗ್ಗೆ ಮುಂದುವರಿಯುತ್ತಾ ಹೇಳುತ್ತಾರೆ:

واختصاص سليمان عليه السلام بذلك إنما هو على جهة تسخيرهم في الأعمال, وبناء القصور, والقلاع وغير ذلك، وهذا لم يقل به أحد من الناس، وأنه ممكن للبشر بعده، أما أن يختص سليمان برؤيتهم دون غيره فهذا ما ترده الشواهد الدالة على إمكانية رؤية الأنبياء وغيرهم للجن. بل إن تسخيرهم لنبينا عليه الصلاة والسلام كان ممكناً عندما قال'' عَنْ أَبِي هُرَيْرَةَ، عَنِ النَّبِيِّ صلى الله عليه وسلم قَالَ " إِنَّ عِفْرِيتًا مِنَ الْجِنِّ تَفَلَّتَ عَلَىَّ الْبَارِحَةَ . أَوْ كَلِمَةً نَحْوَهَا . لِيَقْطَعَ عَلَىَّ الصَّلاَةَ،

---

[34] ಶೈಖ್ ಅಲ್ ಬಹಿಯ ನಜಾ ಇಬ್ರಾಹೀಮ್ ಅಲ್ ಖೌಲೀ ಮಿಸ್ರೀ ಜನನ ಹಿಜರಿ: 1317, (1901–1977) ದಾಯೀ 'ಅಲ್ ಇಕ್ವಾನುಲ್ ಮುಸ್ಲಿಮೀನ್'

[35] ಗ್ರಂಥ 'ಆದಮ್ ಅಲ್ಯಹಿಸ್ಸಲಾಮ್' ಪುಟ:88

فَأَمْكَنَنِي اللَّهُ مِنْهُ، فَأَرَدْتُ أَنْ أَرْبِطَهُ إِلَى سَارِيَةٍ مِنْ سَوَارِي الْمَسْجِدِ، حَتَّى تُصْبِحُوا وَتَنْظُرُوا إِلَيْهِ كُلُّكُمْ،[36])

ಸುಲೈಮಾನ್ ಅಲೈಹಿಸ್ಸಲಾಮರಿಗೆ ಪ್ರತ್ಯೇಖವಾಗಿರುವುದು ಕೆಲಸ ಕಾರ್ಯಗಳಲ್ಲಿ, ಅರಮನೆ ರಚನೆಗಾಗಿ, ಕೋಟೆಯ ರಚನೆಗಾಗಿ ಹಾಗೂ ಇತ್ಯಾದಿಗಳಿಗಾಗಿ ಅಧೀನಗೊಳಿಸಿರುವುದಾಗಿದೆ. ಈ ಕಾರ್ಯ ಅವರ ನಂತರ ಬರುವ ಪ್ರತೀಯೊಬ್ಬನಿಗೂ ಜಿನ್ನಿನೊಂದಿಗೆ ಮಾಡಿಸಿ ಕೊಳ್ಳಲು ಸಾದ್ಯವೆಂದು ಯಾರೂ ಹೇಳಿರುವುದಿಲ್ಲ. ಅದು ಪ್ರವಾದಿ ಸುಲೈಮಾನ್ ಅಲೈಹಿಸ್ಸಲಾಮರಿಗಿರುವ ಪ್ರತ್ಯೇಖತೆಯಲ್ಲೊಂದಾಗಿದೆ. ಇದರಿಂದ ಪ್ರತೀಯೊಬ್ಬನಿಗೂ ಜಿನ್ನನ್ನು ನೋಡಲು ಸಾದ್ಯವೆಂದ ತಿಳಿಯುವಂತಿಲ್ಲ. ಆದರೆ ನಮ್ಮ ಪ್ರವಾದಿ(ﷺ)ರವರಿಗೆ ಆಧೀನವಾಗಿಸಿರುವುದು ಅದು ಸಾದ್ಯವಿರುವ ಸಂಗತಿಯಾಗಿರುತ್ತದೆ. ಹದೀಸಿನಲ್ಲಿ ಬಂದಿರುವಂತೆ. ಅಬೀಹುರ್ರೈರಾ ರಿಂದ ವರದಿ ಪ್ರವಾದಿ(ﷺ)ರವರು ಹೇಳುತ್ತಾರೆ: "ನಿನ್ನೆ ರಾತ್ರಿ ಅವಿಧೇಯನಾದ ಜಿನ್ನ್ ಆಕಸ್ಮಿಕವಾಗಿ ನನ್ನಬಳಿ ಬಂದ; ಯಾ ಇದೇ ರೀತಿಯ ಮಾತು ಪ್ರವಾದಿ(ﷺ)ರವರು ಹೇಳಿದರು. ಅವನು ನನ್ನ ನಮಾಝಿನಲ್ಲಿ ಸಂಶಯ ಸೃಷ್ಟಿಸಲು ಆಗ್ರಹಿಸಿದನು ಆದರೆ ಅಲ್ಲಾಹನು ನನಗೆ ಅವನ ಮೇಲೆ ಹತೋಟಿ ನೀಡಿದನು. ಮಸ್ಜಿದ್‌ನಲ್ಲಿಯ ಯಾವುದಾದರೊಂದು ಕಂಬಕ್ಕೆ ಕಟ್ಟಿ ಹಾಕುವೆ ಅಂದು ಕೊಂಡೆನು ನೀವೆಲ್ಲರೂ ಅವನನ್ನು ನೋಡಿರೆಂದ ಆದರೆ ನನಗೆ ನನ್ನ ಸಹೋದರ ಸುಲೈಮಾನ್ (ಅ) ರವರ (ಸೂರಃ ಸ್ವಾದ್ ನಲ್ಲಿರುವು)[37]ದುವಾ ನೆನಪಾಯಿತು".

---

[36] ಸ್ವಹೀಹುಲ್ ಬುಖಾರಿ ಅಬೀ ಹುರ್ರೈರಾ (ರ)ರವರಿಂದ ವರದಿ –3423.

[37] ಅವರು (ಸುಲೈಮಾನ್(ಅ)ಹೇಳಿದರು: "ನನ್ನೊಡೆಯಾ ನನ್ನನ್ನು ಕ್ಷಮಿಸು ಮತ್ತು ನನ್ನ ನಂತರ ಯಾರಿಗೂ ನೀಡದಂತಹ ಒಂದು ಸಾಮ್ರಾಜ್ಯವನ್ನು ನನಗೆ ನೀಡು ನೀನು ಕಂಡಿತವಾಗಿಯೂ ಉದಾರಿಯಾಗಿರುವೆ"

قَالَ رَبِّ اغْفِرْ لِي وَهَبْ لِي مُلْكًا لا يَنبَغِي لأَحَدٍ مِّنْ بَعْدِي إِنَّكَ أَنتَ الْوَهَّابُ( ص: 35.)

(وإلا فالتسخير كان ممكناً لمحمد عليه السلام، فكيف لا تكون الرؤية للجن جائزة في حقه صلى الله عليه وسلام ؟)[38].

ಹಾಗೆ (ಪ್ರವಾದಿ ಸುಲೈಮಾನ್(ಅ)ರವರ ಪ್ರಾರ್ಥನೆ) ಇಲ್ಲವಾಗಿರುತ್ತಿದ್ದರೆ ಪ್ರವಾದಿ ಸ. ರವರಿಗೆ ಜಿನ್ನ್ ಗಳನ್ನು ಅಧೀನದಲ್ಲಿರಿಸಿಕೊಳ್ಳಲು ಸಾದ್ಯವಾಗುತಿತ್ತು. ಹೀಗಿರುವಾಗ ಹೇಗೆ ತಾನೆ ಜಿನ್ನನ್ನು ನೋಡಲು ಪ್ರವಾದಿ(ಸ)ಅಸಾದ್ಯ ಎನ್ನುವುದಕ್ಕೆ ಸಾದ್ಯ?.

ಈ ವಿಶಯದ ಬಗ್ಗೆ ಮಾತನಾಡುತ್ತಾ ಅಲ್ಲಾಮ ಶೈಖ್ ಬಾಕಿಲ್ಲಾನೀ[39] ಹೇಳುತ್ತಾರೆ:

(ومن يقر بوجودهم من القدرية يزعم أنهم لا يرون لرقة أجسامهم ونفوذ الشعاع منها...، ومن العلماء من قال: أنهم لا يرون، لأنهم لا ألوان لهم[40] )

ಅವುಗಳ ಅಸ್ತಿತ್ವವನ್ನು ವಿಧಿವಾದದಿಂದ ಒಪ್ಪಿಕೊಂಡು ಅವರಿಗೆ ನಾಜೂಕಾದ ಶರೀರವಿರುವುದರಿಂದ ಮತ್ತು ಅವುಗಳಿಂದುಟಾಗುವ ಕಿರಣದ ಪ್ರಭಾವದಿಂದ ನೋಡಲು ಸಾದ್ಯವಿಲ್ಲ ಎಂದು ಯಾರಾದರೂ ಹೇಳುವುದಾದರೆ. ಅವರ(ಜಿನ್ನುಗಳ)ನ್ನು ನೋಡಲು ಸಾದ್ಯವಿಲ್ಲ ಕಾರಣ ಅವುಗಳಿಗೆ ಬಣ್ಣಗಳಿರುವುದಿಲ್ಲ ಎಂದು ಉಲಮಾವುಗಳಲ್ಲಿ ಕೆಲವರು ಹೇಳಿರುವರು

## ಅಭಿಪ್ರಾಯ ನಾಲ್ಕು:

---

[38] 'ಅಲ್‌ಮೌಸೂಅ ಅಲ್‌ಅಕದೀಯ ಅದುರರು ಸುನ್ನಿಯಃ' –8/350

[39] ಖಾಳೀ ಅಬೂಬಕ್ಕರ್ ಬಾಕಿಲ್ಲಾನೀ (ಮುಹಮ್ಮದ್ ಬಿನ್ ಅತ್ವಯ್ಯಿಬ್ ಬಿನ್ ಮುಹಮ್ಮದ್ ಬಿನ್ ಜಅಫರ್ ಬಿನ್ ಅಲ್ ಕಾಸಿಮ್ ಅಲ್ ಖಾಳೀ ಅಬೂಬಕ್ಕರ್ ಬಾಕಿಲ್ಲಾನೀ ಅಲ್ ಬಸ್ವರೀ.' ಶೈಖುಸುನ್ನಃ ಲಿಸಾನುಲ್ ಉಮ್ಮಃ' ಅಹುಲು ಸುನ್ನಃ, ಅಹ್ಲುಲ್ ಹದೀಸ್, ಅಶಅರೀ ಮಾಲಿಕೀ ಮರಣ ಹಿಜರೀ: 402. (950–1013).

[40] ' ಅಲ್ ಜಿನ್ನು ಬೈನಲ್ ಹಖಾಯಿಕಿ ವಲ್ ಅಸಾತ್ವೀರ್' ಪುಟ:–1/49

ನಾಲ್ಕನೇಯ ಅಭಿಪ್ರಾಯ ಕಾರರಂತೆ: ಜಿನ್ನನ್ನು ನೋಡುವ ಕಾರ್ಯಗಳಲ್ಲಿ ವಿಶಾಲವಾದುದು ಅಂಬಿಯಾಅರಿಗೂ ಇನ್ನು ಅಲ್ಲಾಹನು ಪ್ರತ್ಯೇಖಿಸಿದ ಅಂಬಿಯಾರಲ್ಲದ ಮನುಷ್ಯರಲ್ಲಿ ಕೆಲವರಿಗು ನೋಡಲು ಸಾದ್ಯ ಎನ್ನುವುದು ಆಲೂಸಿ ಮತ್ತು ಇಬ್ನುಲ್ ಅರಬಿ ಯವರ ಅಭಿಪ್ರಾಗಳಾಗಿವೆ.

ಇಬ್ನುಲ್ ಅರಬಿ[41] ಹೇಳುತ್ತಾರೆ:

(وليس يمتنع أن يراهم النبي صلى الله عليه وسلم في صورهم كما يرى الملائكة[42])

ಪ್ರವಾದಿ(ﷺ)ರವರು ಮಲಾಯಿಕತರನ್ನು ದೃಷ್ಟಿಸಿದಂತೆ ಜಿನ್ನನ್ನು ಅವುಗ ರೂಪಗಳಿಂದಲೇ ನೋಡಿರುವುದು ವಿರೋಧಿಸಲಾಗದು.

ಅಲ್ಲಾಮ ಅಲೂಸೀ[43] ಹೇಳುತ್ತಾರೆ:

(وقد ترى – أي الجن – بصور غير صورها الأصلية، بل وبصورها الأصلية التي خلقت عليها كالملائكة عليهم السلام، وهذا للأنبياء صلوات الله تعالى وسلامه عليهم، ومن شاء الله تعالى من خواص عباده عز وجل[44])

"ಈಗ ನೀನು ನೋಡುತಿರುವಂತೆ(ಜಿನ್ನನ್ನು) ಯಾತಾರ್ಥ ರೂಪದಿಂದ ರೂಪಾಂತರ ಗೊಂಡಹಾಗೆ. ಆದರೆ ಅವುಗಳ ಸೃಷ್ಟಿಸಿರುವ ನಿಜವಾದ ರೂಪ

---

41 ಮುಹಮ್ಮದ್ ಬಿನ್ ಅಬ್ದುಲ್ಲಾಹ್ ಬಿನ್ ಮುಹಮ್ಮದ್ ಅಲ್ ಮಆಫಿರೀ; (ಖಾಳೀ ಅಬೂಬಕ್ಕರ್ ಬಿನ್ ಅಲ್ ಅರಬೀ) ಮಾಲಿಕೀ ಮರಣ ಹಿಜರಿ: 543 ( ಅಹ್ಲುಸುನ್ನಃ ಅಶಾಯಿರಃ )

42 'ಅಹ್ಕಾಮುಲ್ ಖುರ್ಆನ್ ಪುಟ:–4/1864

43 ಮಹಮೂದ್ ಶಿಹಾಬುದ್ದೀನ್ ಅಬೂ ಅಸನಾಅ ಅಲ್ ಹುಸೈನೀ ಅಲ್ ಆಲೂಸೀ ಸಲಫೀ. ಕಾಲಘಟ್ಟ: (1217–1270 ಹಿಜರಿ, 1803–1854 ಇಸವಿ.)

44 ತಫ್ಸೀರುಲ್ ರೂಹುಲ್ ಮಆನೀ ಪುಟ:–29/82.

ಮಲಾಯಿಕತ್ ಅಲೈಹಿಮುಸ್ಸಲಾಮ್ ರಂತೆ ಅಂಬಿಯಾ(ಅ) ರವರಿಗೆ ಮಾತ್ರ ಮತ್ತು ಅಲ್ಲಾಹನ ಪ್ರತ್ಯೇಖ ದಾಸರಿಗೆ ಮಾತ್ರ.

ಇನ್ನು ಜಿನ್ನಿನ ನಿಜರೂಪವನ್ನು ಅಂಬಿಯಾ (ಅ)ರವರ ಹೊರತಿರುವವರು ದೃಷ್ಟಿಸಿದ ಬಗ್ಗೆ ಇಮಾಮ್ ಬೈಹಖೀ ತನ್ನ ಗ್ರಂಥ ದಲಾಯಿಲುನ್ನುಬುವ್ವ ದಲ್ಲಿ ಹಸನ್ ರವರಿಂದ ಅಮ್ಮಾರ್ ಬಿನ್ ಯಾಸರ್(ರ) ವಿವರಿಸುವುದಾಗಿ ವರದಿ.

(قاتلت مع رسول الله صلى الله عليه وسلم الجن والإنس، فسئل عن قتال الجن فقال: أرسلني رسول الله صلى الله عليه وسلم إلى بئر أستقي منها، فرأيت الشيطان في صورته، فصارعني فصرعته، ثم جعلت أدمي أنفه بفهر كان معي أو حجر. فقال النبي صلى الله عليه وسلم لأصحابه)) :إن عمار لقي الشيطان عند البئر فقاتله ,((فلما رجعت سألني فأخبرته الأمر، فكان أبي هريرة رضي الله عنه يقول: إن عمار بن ياسر أجاره الله من الشيطان على لسان رسول الله صلى الله عليه وسلم[45]. )

ಪ್ರವಾದಿ(ﷺ)ರವರೊಂದಿಗೆ ಸೇರಿ ಮನುಷ್ಯ ಮತು ಜಿನ್ನಿನೊಂದಿಗೆ ಯುದ್ಧ ಮಾಡಿರುವೆವು, ಜಿನ್ನಿನೊಂದಿಗೆ ಯುದ್ಧಮಾಡಿದ ವಿವರವನ್ನು ಕೇಳಿದಾಗ ಅವರು ಹೇಳಿದರು: ಪ್ರವಾದಿ(ﷺ)ರವರು ನನ್ನನ್ನು ನೀರು ತರಲು ಬಾವಿಯ ಬಳಿಗೆ ಕಳುಹಿಸಿದರು, ಶೈತಾನನನ್ನು ಅವನ ರೂಪದಲ್ಲಿ ನಾನಲ್ಲಿ ಕಂಡೆನು ಅವನು ನನ್ನ ಬಳಿ ದುಮುಕಿದನು ನಾನವನ ಬಳಿ ದುಮುಕಿದೆನು, ನಂತರ ಕಲ್ಲಿನ ಹರಳುಗಳಿಂದ ಅಥವಾ ಕಲ್ಲಿನಿಂದ ಅವನ ಮೂಗಿನ ಮೇಲೆ ಜಡಿದೆನು. ಪ್ರವಾದಿ (ﷺ)ರು ಸ್ವಹಾಬತ್ತರೊಂದಿಗೆ ಅಮ್ಮಾರ್(ರ) ಬಾವಿಯ ಬಳಿ ಶೈತಾನನನ್ನು ಕಂಡು ಅವನೊಂದಿಗೆ ಯುದ್ಧಮಾಡಿದರು. ಅಲ್ಲಿಂದ

---

[45] ದಲಾಯಿಲುನುಬುವ್ವ. ಬೈಹಕೀ.–7/124

ಮರಳಿದಾಗ ನನ್ನಲ್ಲಿ ಕೇಳಾಯಿತು ಕಾರ್ಯಗಳನ್ನು ವಿವರಿಸಿದೆನು. ಅವಾಗ ಅಬೀಹುರ್ರ್ಯರಾ(ರ) ಹೇಳಿದರು ನಿಶ್ಚಯವಾಗಿಯೂ ಅಮ್ಮಾರ್ ಬಿನ್ ಯಾಸರನ್ನು ಅಲ್ಲಾಹನು ದತ್ತು ಪಡೆದುಕೊಂಡನು ಶೈತಾನನಿಂದ ಪ್ರವಾದಿ(ﷺ)ರ ಮಾತಿನ ಮೇಲೆ.

ಅಬ್ದುಲ್ ಕರೀಮ್ ತೂಫಾನ್ ಅಬೀದಾತ್[46] ಹೇಳುತ್ತಾರೆ:

ومما تقدم لنا من الأقوال في مسألة رؤية الجن يتبين لنا أن الحق مع الفريق الذي قال بوقوع رؤيتهم للأنبياء مطلقاً ولغيرهم عند تمثلهم، وهو ما عليه الأكثرية من العلماء، وهو القول الذي تدعمه النصوص الثابتة من السنة النبوية، وهو الذي تشهد له التجربة مع كثير من الناس[47].

ಮೇಲೆ ಹೇಳಿದ ಎಲ್ಲಾ ಜಿನ್ನನ್ನು ದೃಷ್ಟಿಸುವ ವಿಷಯಗಳನ್ನು ಅವಲೋಕನ ಮಾಡಿದಾಗ ಅಂಬಿಯಾರಲ್ಲದೇ ಜಿನ್ನಿನ ನಿಜರೂಪ ಬೇರೆಯಾರಿಗೂ ನೋಡಲಸಾಧ್ಯ ರೂಪಾಂತರವನ್ನು ಇತರರು ನೋಡಬಹುದೆನ್ನುವುದು ಹಲವರಲ್ಲಿ ಬಹು ಪಕ್ಷದ ಅಭಿಪ್ರಾಯ ಸರಿ ಎಂದು ಆ ಮಾರ್ಗದಲ್ಲಿ ಜನರಿರುವುದೂ ಆಗಿರುತ್ತದೆ.

## ಜಿನ್ ಮತ್ತು ಅದೃಷ್ಯಜ್ಞಾನ:

ಈ ವರೆಗೆ ಜಿನ್ನ ಬಗ್ಗೆ ನಾವು ತಿಳಿದುಕೊಂಡು ಬಂದಂತೆ ಮುಂದೆ ಅದರ ಜ್ಞಾನದ ಕುರಿತು ತಿಳಿಯುವುದು ಅತ್ಯಾವಶ್ಯಕವಾಗಿದೆ.

---

46 ಅಬ್ದುಲ್ ಕರೀಮ್ ತೂಫಾನ್ ಅಬೀದಾತ ರ 'ಆಲಮುಲ್ ಜಿನ್ನ್ ಫಿ ಔಯಿ ಕಿತಾಬಿ ವಸುನ್ನಃ' ಎಂಬ ಗ್ರಂಥವು ಶೈಖ್ ಅಬ್ದುಲ್ ರಹ್ಮಾನ್ ಬಿನ್ ನಾಸಿರ್ ಅಲ್‌ಬರ್ರಾಕ್ ರ ಪರಿಷೀಲನೆಗೆ ಒಳಪಟ್ಟಿರುತ್ತದೆ.

47 `ಆಲಮುಲ್ ಜಿನ್ನ್ ಫೀ ಔವುಲ್ ಕಿತಾಬಿ ವಸುನ್ನಃ' ಪುಟ:-42

ಜಿನ್ನ್ ಗಳಿಗೆ ಅದೃಷ್ಯಜ್ಞಾನದ ಕುರಿತಿರುವ ತಿಳುವಳಿಕೆಯ ಬಗ್ಗೆ ನಾವು ಅವಲೋಕಿಸಿದಾಗ ಖುರ್ಆನ್ ಇದನ್ನು ಸಂಪೂರ್ಣವಾಗಿ ನಿಷೇಧಿಸುತ್ತದೆ. ಅವುಗಳಿಗೆ ಅದೃಷ್ಯ ಜ್ಞಾನ ಇಲ್ಲವೇ ಇಲ್ಲ ಎಂಬುದನ್ನು ಪ್ರತಿಪಾದಿಸುತ್ತದೆ.

ಅದೃಷ್ಯಜ್ಞಾನ ಜಿನ್ನ್ ವರ್ಗಕ್ಕೆ ಇರುತಿದ್ದರೆ ಅವರೆಂದೂ ಅಕ್ರಮವೆಸಗಲು ಮುಂದಾಗಲಾರರು. ಅವುಗಳಿಗೆ ಅದೃಷ್ಯಜ್ಞಾನವಿಲ್ಲ ಎಂಬುವುದನ್ನು ಖುರ್ಆನ್ ಈ ಎರಡು ಸೂಕ್ತಗಳಿಂದ ಸ್ಪಷ್ಟವಾಗಿ ನಮಗೆ ತಿಳಿದುಕೊಳ್ಳಬಹುದು.

ಸೂರಃ ಇಸ್ರಾ ಸೂಕ್ತ 88 ರಲ್ಲಿ ಅಲ್ಲಾಹನು ಪುನಃ ಮನುಷ್ಯವರ್ಗದ ಮತ್ತು ಜಿನ್ನ್ ವರ್ಗದಲ್ಲಿರುವ ಅವಿಶ್ವಾಸಿಗಳಿಗೆ ಪಂಥಾಹ್ವಾನ ಮಾಡಿರುವನು.

قُل لَّئِنِ اجْتَمَعَتِ الْإِنسُ وَالْجِنُّ عَلَىٰ أَن يَأْتُوا بِمِثْلِ هَٰذَا الْقُرْآنِ لَا يَأْتُونَ بِمِثْلِهِ وَلَوْ كَانَ بَعْضُهُمْ لِبَعْضٍ ظَهِيرًا[48]

"ಮಾನವರು ಮತ್ತು ಜಿನ್ ಗಳು ಒಂದಾಗಿ ಈ ಖುರ್ಆನಿಗೆ ಸಮಾನವಾಗಿರುವ ಒಂದನ್ನು ರಚಿಸಿತರಲು ತೀರ್ಮಾನಿಸಿದರೆ ನಿಸ್ಸಂದೇಹವಾಗಿಯೂ ಅದರಂತಿರುವ ಒಂದನ್ನುತರಲು ಅವರಿಂದಾಗದು . ಇನ್ನುಅವರಲ್ಲಿ ಕೆಲವರು ಕೆಲವರಿಗೆ ಸಹಾಯಕ್ಕೆ ನಿಂತರೂ ಸರಿ."

ಇಲ್ಲಿ ಒಂದು ವಿಷಯ ವ್ಯಕ್ತವಾಗುತ್ತದೆ ಏನೆಂದರೆ ಜಿನ್ನ್‌ಗಳ ಸಾಮರ್ಥ್ಯ ಎಷ್ಟೆನ್ನುವುದು. ಅಲ್ಲಾಹನು ತುಲನೆ ಮಾಡಿ ತಿಳಿಸಿದ್ದಾನೆ ಇಂತಹಾ ಪ್ರಕಾಶಮಯ ಪುರಾವೆ ಮುಂದಿರುವಾಗ ಜಿನ್ನ್‌ಗಳ ಜ್ಞಾನ ಎಷ್ಟೆನ್ನುವದು ಸ್ಪಷ್ಟವಲ್ಲವೇ. ಹಾಗೆಯೇ ಜಿನ್ನ್ ವರ್ಗವು ಮನುಷ್ಯನಿಗಿಂತ ಹೆಚ್ಚು ಜ್ಞಾನ ಹೊಂದಿಲ್ಲವೆದೂ ತಿಳಿಯಿತು.

ಖುರ್ಆನಿನಲ್ಲಿ ಅಲ್ಲಾಹನು ಸ್ಪಷ್ಟವಾಗಿ ತಿಳಿಸುತ್ತಾನೆ:

---

[48] ಸೂರಃ ಇಸ್ರಾಅದ 88 ನೇ ಆಯತ್ತು.

يَا مَعْشَرَ الْجِنِّ وَالإِنْسِ إِنِ اسْتَطَعْتُمْ أَنْ تَنْفُذُوا مِنْ أَقْطَارِ السَّمَاوَاتِ وَالأَرْضِ فَانفُذُوا ۚ لَاتَنفُذُونَ إِلَّابِسُلْطَانٍ [49]

'ಓ ಜಿನ್ನ್ ಮತ್ತು ಮನುಷ್ಯರ ಸಮುದಾಯಗಳೇ! ಆಕಾಶಗಳ ಮತ್ತು ಭೂಮಿಯ ವ್ಯಾಪ್ತಿಗಳಿಂದ ಹೊರ ಹೋಗಲು ನಿಮಗೆ ಸಾಧ್ಯವೆಂದಾದರೆ ಹೊರಹೋಗಿರಿ.ಒಂದುಅಧಿಕಾರವುದೊರೆಯದ ಹೊರತು ನೀವು ಹೊರಹೋಗಲಾರಿರಿ.'

ಇಲ್ಲಿ ಅಲ್ಲಾಹನು ಜಿನ್‌ಗಳ ಸಾಮರ್ಥ್ಯವನ್ನು ಎತ್ತಿಹಿಡಿದಿರುವನು. ಮರಣವನ್ನು ತಪ್ಪಿಸಿ ಗಗನ ಮತ್ತು ಭುವಿಯ ವ್ಯಾಪ್ತಿಯಿಂದ ಹೊರ ಜಗಿಯಲು ನಿಮಗೆ ಸಾದ್ಯವೆಂದಾದರೆ ಹೊರ ನಡೆಯಿರಿ. ಮರಣವು ನಿಮ್ಮ ಬೆನ್ನತ್ತುವುದರಲ್ಲಿ ಸಂಶಯವಿಲ್ಲ. ಈ ವಿವರಣೆಯಲ್ಲಿ ನಮಗೆ ಉಪದೇಶವೇನೆಂದರೆ ಮನುಷ್ಯನಿಗಾಗಲಿ ಜಿನ್‌ಗಾಗಲಿ ಅವರ ಸಾಮರ್ಥ್ಯಕ್ಕೆ ಒಂದು ಪರಿದಿಯೆನ್ನುವುದಿದೆ. ಅದಕ್ಕಿಂತ ಹೆಚ್ಚಾಗಿ ಏನನ್ನೂ ಮಾಡಲಸಾದ್ಯವಿಲ್ಲ ಎನ್ನುವುದಾಗಿದೆ.

ಜಿನ್ನ್ ಗಳಿಗೆ ಅದೃಷ್ಯಜ್ಞಾನವಿದೆಯೇ ಎನ್ನುವ ವಿಷಯದಲ್ಲಿ ನಾವು ಚರ್ಚಿಸುವುದಾದರೆ ಇದರ ಪರವಾಗಿ ಖುರ್ಆನ್ ಮತ್ತು ಹದೀಸಿನಲ್ಲಿ ಯಾವುದೇ ಪುರಾವೆ ತೋರಿದ್ದಾಗಿ ಗಮನಕ್ಕೆ ಬಂದಿಲ್ಲ. ಇದರ ಬಗ್ಗೆ ಇರುವ ಎಲ್ಲಾ ವಿವರಗಳೂ ಕಾಲ್ಪನಿಕವೂ ಮೌಖಿಕವೂ ಆಗಿರುತ್ತದೆ.

[49] ಸೂರಃ ಅರ್ರಹ್ಮಾನ್ 33 ನೇ ಆಯತ್ತು.

فَلَمَّا قَضَيْنَا عَلَيْهِ الْمَوْتَ مَا دَلَّهُمْ عَلَىٰ مَوْتِهِ إِلَّا دَابَّةُ الْأَرْضِ تَأْكُلُ مِنسَأَتَهُ ۖ فَلَمَّا خَرَّ تَبَيَّنَتِ الْجِنُّ أَن لَّوْ كَانُوا يَعْلَمُونَ الْغَيْبَ مَا لَبِثُوا فِي الْعَذَابِ الْمُهِينِ [50]

ನಾವು ಸುಲೈಮಾನ್‌ರ ಮೇಲೆ ಮರಣವನ್ನು ವಿಧಿಸಿದಾಗ ಜಿನ್ನ್‌ಗಳಿಗೆ ಅವರ ಮರಣದಕುರಿತು ತಿಳಿಸಿದ್ದು ಅವರ ಊರುಗೋಲನ್ನುತಿನ್ನುತ್ತಿದ್ದ ಗೆದ್ದಲ ಹುಳುಗಳಾಗಿದ್ದವು. ತರುವಾಯಅವರು ನೆಲಕ್ಕುರುಳಿದಾಗ ನಮಗೆ ಅಗೋಚರ ವಿಷಯಗಳು ಅರಿಯುತ್ತಿದ್ದರೆ ಅವಮಾನಕರವಾದ ಶಿಕ್ಷೆಯಲ್ಲಿ[51] ಕಳೆಯ ಬೇಕಾಗಿರಲಿಲ್ಲ ಎಂದು ಜಿನ್ನ್‌ಗಳು ಅರಿತುಕೊಂಡರು.

ಜಿನ್ನ್ ಗಳಿಗೆ ಅದೃಷ್ಯಜ್ಞಾನವಿಲ್ಲವೆಂದು ಈ ಆಯತ್ತಿನಿಂದ ಸ್ಪಷ್ಟವಾಗುವುದು. ಅಲ್ಲದೇ ಸುಲೈಮಾನ್ (ಅ)ಮರ ಆಜ್ಞೆಯನ್ನು ಅನಿವಾರ್ಯವಾಗಿ ಮಾಡಲೇಬೇಕಾಗಿತ್ತೆನ್ನುವ ಇನ್ನೊಂದು ಸತ್ಯವೂ ಇಲ್ಲಿ ಎದ್ದು ತೋರುತ್ತದೆ. ಖುರ್ಆನಿನ ಸ್ಪಷ್ಟ ಉತ್ತರದಿಂದ ನಿಷೇಧಿಸಲಾಸದ್ಯವಾದ ಕಾರ್ಯ ಜಿನ್ನ್‌ಗಳಿಗೆ ಅದೃಷ್ಯಜ್ಞಾನ ವಿಲ್ಲವೆನ್ನುವುದುದಾಗಿದೆ.

---

[50] (ಸೂರಃ ಸಬಾ ಆಯತ್ 14)

[51] ಮನುಷ್ಯರಿಗೆ ತಿಳಿಯಲು ಸಾಧ್ಯವಾಗದ ಕೆಲವು ವಿಷಯಗಳನ್ನು ತಿಳಿಯಲು ತಮಗೆ ಸಾಧ್ಯವಿದೆ ಮತ್ತು ಮನುಷ್ಯ ಸಾಮರ್ಥ್ಯಕ್ಕೆ ಅತೀತವಾದ ಕೆಲವು ಕಾರ್ಯಗಳನ್ನು ಮಾಡಲು ತಾವು ಸಮರ್ಥರೆಂಬ ಭಾವನೆಯನ್ನು ಜಿನ್ನ್‌ಗಳು ಹೊಂದಿದ್ದರು. ಅವರನ್ನು ಅಲ್ಲಾಹು ಸುಲೈಮಾನ್(ಅ)ರಿಗೆ ಅಧೀನಗೊಳಿಸಿ ಕೊಟ್ಟನು. ಸುಲೈಮಾನ್‌ರವರು ಊರುಗೋಲನ್ನು ನೆಲಕ್ಕೂರಿ ನಿಂತು ಕೆಲಸದ ಮೇಲ್ನೋಟ ವಹಿಸುತ್ತಿರುವಾಗಲೇ ಅಲ್ಲಾಹು ಅವರನ್ನು ಮೃತಪಡಿಸಿದನು. ಆದರೆ ಅದನ್ನು ತಿಳಿಯಲು ಜಿನ್ನ್‌ಗಳಿಗೆ ಸಾಧ್ಯವಾಗಲಿಲ್ಲ. ಸುಲೈಮಾನ(ಅ)ರವರು ನಮ್ಮನ್ನು ಗಮನಿಸುತ್ತಿದ್ದಾರೆಂದು ಭಾವಿಸಿ ಜಿನ್ನ್‌ಗಳು ಅವಿಶ್ರಾಂತವಾಗಿ ಕೆಲಸ ಮಾಡುತ್ತಿದ್ದರು. ಕೆಲವು ದಿನಗಳ ಬಳಿಕ ಸುಲೈಮಾನ್(ಅ)ರವರ ಊರುಗೋಲನ್ನು ಗೆದ್ದಲು ತಿಂದುದರಿಂದ ಅದುತುಂಡಾಗಿ ಮೃತದೇಹವು ಮಗುಚಿಬಿದ್ದಾಗಲೇ ಜಿನ್ನ್‌ಗಳು ಅವರ ಮರಣದ ಕುರಿತು ಅರಿತು ಕೊಂಡರು.

ಅದೇರೀತಿ ಸಾಧಾರಣ ಜ್ಞಾನವಲ್ಲದೆ ಆಪಾರಜ್ಞಾನ ಜಿನ್ನ್ ಗಳಿಗಿಲ್ಲವೆನ್ನುವ ಆಯತ್ ಗಳನ್ನು ನಾವು ನೋಡೋಣ.

ಸೂರಃ ಇಸ್ರಾಅದ 88 ನೇ ಆಯತ್ತಿನಲ್ಲಿ ಅಲ್ಲಾಹನು ಹೇಳುವುದನ್ನು ನೋಡಿರಿ:

## ದರ್ಮ ಮತ್ತು ಜಿನ್ನ್:

ಜಿನ್ನ್ ವರ್ಗಕ್ಕೆ ಪ್ರತ್ಯೇಖ ನಬಿ ಯಾಗಲಿ ದರ್ಮವಾಗಲಿ ಇದೆಯೇಎನ್ನುವ ವಿಷಯದ ಬಗ್ಗೆ ಗಮನ ಹರಿಸಿದರೆ ಖುರ್ ಆನಿನಲ್ಲಿ ಬಹಳಷ್ಟು ಕಡೆಇದರಬಗ್ಗೆಇರುವ ವಿಷಯಗಳನ್ನು ಸ್ಪಷ್ಟವಾಗಿವಿವರಿಸಿರುದುದು ನೋಡಲು ಸಾದ್ಯವಾಗುತ್ತದೆಅಲ್ಲದೇ ಈ ವಿಷಯದ ಬಗ್ಗೆ ಮಾತನಾಡುವಾಗಜಿನ್ ಗಳ ಸ್ವಾತಂತ್ರ್ಯಯ ಬಗ್ಗೆಯೂಕಣ್ಣೋಡಿಸಬೇಕಾಗಿ ಬರುವುದು. ಅಲ್ಲಾಹನು ಸೂರಃ ಅಲ್ಅನ್ಆಮ್ ಆಯತ್ 130 ರಲ್ಲಿಉಲ್ಲೇಖಿಸುವುದನ್ನು ನೋಡಿ.

يَا مَعْشَرَ الْجِنِّ وَالْإِنسِ أَلَمْ يَأْتِكُمْ رُسُلٌ مِّنكُمْ يَقُصُّونَ عَلَيْكُمْ آيَاتِي وَيُنذِرُونَكُمْ لِقَاءَ يَوْمِكُمْ هَٰذَا ۚقَالُوا شَهِدْنَا عَلَىٰ أَنفُسِنَا ۖوَغَرَّتْهُمُ الْحَيَاةُ الدُّنْيَا وَشَهِدُوا عَلَىٰ أَنفُسِهِمْ أَنَّهُمْ كَانُواكَافِرِينَ [52]

"ಓ ಜಿನ್ನ್ ಮತ್ತು ಮನುಷ್ಯ ಸಮೂಹವೇ! ನಿಮಗೆ ನನ್ನ ದೃಷ್ಟಾಂತಗಳನ್ನು ವಿವರಿಸುತ್ತಲೂ, ನೀವು ನೋಡುವಂತಹಾ ಈ ದಿನದ ಬೇಟಿಯನ್ನು ನಿಮಗೆ ಮುನ್ನಚೆರಿಕೆ ನೀಡುತ್ತಲೂ ಇರುವ ನಿಮ್ಮಿಂದಲೇ ಇರುವಒಬ್ಬ ಮುನ್ನೆಚೆರಿಕೆಗಾರನು ನಿಮ್ಮ ಬಳಿ ಬಂದಿರಲಿಲ್ಲವೇ?' ಅವರೆಲ್ಲರೂ ಹೇಳುವರು: ನಾವು ನಮ್ಮ ವಿರುದ್ಧವೇ ಸಾಕ್ಷಿಗಳಾಗಿರುವೆವು. ಐಹಿಕ ಜೀವನವು ಅವರನ್ನು

[52] ಸೂರಃ ಅಲ್ಅನ್ಆಮ್ ಆಯತ್ 130

ಮೊಸಕ್ಕೊಳಪಡಿಸಿತು. ತಾವು ಸತ್ಯನಿಷೇಧಿಗಳಾಗಿರುವೆವೆಂದು ಸ್ವತಃತಮ್ಮ ವಿರುದ್ಧವೇಸಾಕ್ಷ್ಯವಹಿಸಿ ಕೊಳ್ಳುವರು."

ಈ ಆಯತ್ತಿನಿಂದ ವ್ಯಕ್ತವಾಗುವ ಸಂಗತಿ ಜಿನ್ ವರ್ಗದಿಂದ ಮನುಷ್ಯ ವರ್ಗದಿಂದ ಅವರಿಂದಲೇ ಒಬ್ಬ ಮುನ್ನೆಚ್ಚರಿಕೆಗಾರನು ಅವರಿಗೆ ನಿಯೋಗಿಸಲ್ಪಟ್ಟಿತ್ತು ಎನ್ನುವುದನ್ನು ಎತ್ತಿತೋರಿಸುತ್ತದೆ. ಈ ವಿಷಯದಲ್ಲಿ ಅಭಿಪ್ರಾಯಗಳ ಸುರಿಮಳೆ ಮುಫಸ್ಸಿರುಗಳ ಲೋಕದಲ್ಲಿತ್ತು ಆದರೆ ಬಲವಾದ ಅಭಿಪ್ರಾಯ ಇಬ್ನುಅಬ್ಬಾಸ್ ರಳಿಯಲ್ಲಾಹು ಅನ್ಹುಮಾ ರವರ ಅಭಿಪ್ರಾಯವಾಗಿದೆ. ಮನುಷ್ಯವರ್ಗಕ್ಕಿರುವ ಮುನ್ನೆಚ್ಚರಿಕೆಗಾರನು ಅಲ್ಲಾಹನ ವತಿಯಿಂದ ಆದರೆ ಜಿನ್ನ್‌ವರ್ಗಕ್ಕಿರುವ ಮುನ್ನೆಚ್ಚರಿಕೆಗಾರನು ಪ್ರವಾದಿಗಳಿಂದಾಗಿದೆ. ಅದಕ್ಕೇ ಪುರಾವೆಯಾಗಿ ಸೂರಃ ಅಲ್‌ಅಹ್ಕಾಫ್ 29 ರಿಂದ 32ರ ವರೆಗಿರುವ ಆಯತ್ತಾಗಿದೆ.

وَإِذْ صَرَفْنَا إِلَيْكَ نَفَرًا مِّنَ الْجِنِّ يَسْتَمِعُونَ الْقُرْآنَ فَلَمَّا حَضَرُوهُ قَالُوا أَنصِتُوا ۖ فَلَمَّا قُضِيَ وَلَّوْا إِلَىٰ قَوْمِهِم مُّنذِرِينَ (29) قَالُوا يَا قَوْمَنَا إِنَّا سَمِعْنَا كِتَابًا أُنزِلَ مِن بَعْدِ مُوسَىٰ مُصَدِّقًا لِّمَا بَيْنَ يَدَيْهِ يَهْدِي إِلَى الْحَقِّ وَإِلَىٰ طَرِيقٍ مُّسْتَقِيمٍ (30) يَا قَوْمَنَا أَجِيبُوا دَاعِيَ اللَّهِ وَآمِنُوا بِهِ يَغْفِرْ لَكُم مِّن ذُنُوبِكُمْ وَيُجِرْكُم مِّنْ عَذَابٍ أَلِيمٍ (31) وَمَن لَّا يُجِبْ دَاعِيَ اللَّهِ فَلَيْسَ بِمُعْجِزٍ فِي الْأَرْضِ وَلَيْسَ لَهُ مِن دُونِهِ أَوْلِيَاءُ ۚ أُولَٰئِكَ فِي ضَلَالٍ مُّبِينٍ (32)[53]

29. ಕುರ್‌ಆನನ್ನು ಕಿವಿಗೊಟ್ಟು ಆಲಿಸುವುದಕ್ಕಾಗಿ ಜಿನ್ನ್‌ಗಳ ಪೈಕಿ ಒಂದುಗುಂಪನ್ನು ನಾವು ತಮ್ಮ ಬಳಿಗೆ ತಿರುಗಿಸಿದ ಸಂದರ್ಭ. ಅವರು ಅದಕ್ಕೆ

[53] ಸೂರಃ ಅಲ್‌ಅಹ್ಕಾಫ್ 29 ರಿಂದ 32

ಸನ್ನಿಹಿತರಾದಾಗ ಅವರು ಪರಸ್ಪರ ಹೇಳಿದರು: 'ಮೌನವಹಿಸಿರಿ!' ತರುವಾಯ ಅದು ಮುಗಿದಾಗ ಅವರು ತಮ್ಮ ಜನರೆಡೆಗೆ ಮುನ್ನೆಚ್ಚರಿಕೆಗಾರರಾಗಿ ಮರಳಿದರು.

30. ಅವರು ಹೇಳಿದರು: 'ಓ ನಮ್ಮಜನರೇ! ಮೂಸಾರ ನಂತರ ಅವತೀರ್ಣಗೊಂಡಿರುವ ಮತ್ತು ಅದಕ್ಕಿಂತ ಮುಂಚಿನದ್ದನ್ನು ದೃಢೀಕರಿಸುವ ಒಂದುಗ್ರಂಥವನ್ನು ಖಂಡಿತವಾಗಿಯೂ ನಾವು ಆಲಿಸಿರುವೆವು. ಅದು ಸತ್ಯದೆಡೆಗೆ ಮತ್ತು ನೇರವಾದ ಮಾರ್ಗದೆಡೆಗೆ ಮುನ್ನಡೆಸುತ್ತದೆ.

31. ಓ ನಮ್ಮಜನರೇ! ಅಲ್ಲಾಹುವಿನೆಡೆಗೆ ಕರೆಯುವ ವ್ಯಕ್ತಿಗೆ ಉತ್ತರ ನೀಡಿರಿ ಮತ್ತು ಅವರಲ್ಲಿ ವಿಶ್ವಾಸವಿಡಿರಿ. ಅವನು ನಿಮ್ಮ ಪಾಪಗಳನ್ನು ಕ್ಷಮಿಸುವನು ಮತ್ತು ನಿಮ್ಮನ್ನುಯಾತನಾಮಯ ಶಿಕ್ಷೆಯಿಂದ ಪಾರುಗೊಳಿಸುವನು.

32. ಅಲ್ಲಾಹುವಿನೆಡೆಗೆ ಕರೆ ನೀಡುವ ವ್ಯಕ್ತಿಗೆಯಾರು ಉತ್ತರ ನೀಡುವುದಿಲ್ಲವೋ, ಅವನಿಗೆ ಈ ಭೂಮಿಯಲ್ಲಿ (ಅಲ್ಲಾಹುವನ್ನು) ಸೋಲಿಸಲು ಸಾಧ್ಯವಾಗಲಾರದು. ಅಲ್ಲಾಹುವಿನ ಹೊರತು ಅವನಿಗೆ ಯಾವುದೇರಕ್ಷಕರೂ ಇರಲಾರರು. ಅವರು ಸ್ಪಷ್ಟವಾದ ಪಥಭ್ರಷ್ಟತೆಯಲ್ಲಿರುವರು.

ಜಿನ್ ಗಳನ್ನು ಅಲ್ಲಾಹನು ಮನುಷ್ಯನಿಗಿಂತ ಮುಂಚೆಯೇ ಸೃಷ್ಟಿಸಿರುವನು ಆದಮ್ ಅಲೈಹಿಸ್ಸಲಾಮರು ಸ್ವರ್ಗದಲ್ಲಿದ್ದಾಗ ಜಿನ್‌ವರ್ಗವು ಭೂಮಿಯಲ್ಲಿ ಯಾವುದೇ ಕಟ್ಟು ನಿಭಂದನೆಗಳಿಗೆ ಒಳಗಾಗದೆ ಜೀವಿಸಿ ತಮ್ಮ ಮನ ಬಂದತೆ ಬಾಳಿ ಬದುಕುತ್ತಿದ್ದರು. ಅವಾಗ ಅವರಿಗೆ ಪ್ರವಾದಿಗಳೋ ಆಜ್ಞಾಪಿಸುವವರೋ ಇರಲಿಲ್ಲ. ಎನ್ನುವುದು. ಕೆಲವು ತಪ್ಸೀರುಗಳಿಂದ ತಿಳಿಯುವ ಸಂಗತಿಯಾಗಿರುತ್ತದೆ. ಅಲ್ಲದೇ ಆದಮರನ್ನು ಸೃಷ್ಟಿಸಿದಾಗ ಮಣ್ಣಿನಲ್ಲಿ ಸೃಷ್ಟಿಸಿದ ಆದಮನಿಗೆ ನಾನು ಸಾಷ್ಟಾಂಗವೆಸಗಲಾರೆಂದು ಧಿಕ್ಕರಿಸಿ ನಂತರ ಸ್ವರ್ಗದಿಂದ ಅಟ್ಟಿಸಲ್ಪಟ್ಟವನಾಗಿಯೂ ನಿಂದಿತನಾಗಿಯೂ ಅಲ್ಲಿಂದ ಎಸೆಯಲ್ಪಟ್ಟಿರುವನು. ಈ ಮೊದಲು ಹೇಳಿದಂತೆ ಅವರಿಗೆ ಅವರಿಂದಲೇ ಅಲ್ಲಾಹನಿಂದ ನಿಯೋಗಿಸಲ್ಪಟ್ಟ ಪ್ರವಾದಿ ಇಲ್ಲ ಅವರು ಮನುಷ್ಯ ಪ್ರವಾದಿಗಳ ಸಂದೇಶಗಳನ್ನು ಕೇಳಿ ಅವರಲ್ಲಿರುವ ಕೆಲವರು ಕೆಲವರಿಗೆ ಮುಟ್ಟಿಸುತಿದ್ದರು.

ಹೊರತು ಅವರಿಗೆ ಅವರಿಂದಲೇ ಅಲ್ಲಾಹನು ಬೇರೆ ನಿಯೋಗಿತ ಪ್ರವಾದಿಯನ್ನು ನಿಯೋಗಿಸಲಿಲ್ಲ.

## ಜಿನ್ ಮತ್ತು ಇನ್ಸಾನ್(ಮನುಷ್ಯ):

ಈ ವಿಷಯದಲ್ಲಿ ನಾವು ಈಮುಂಚೆ ಚರ್ಚಿಸಿದ್ದೇವೆ. ಜಿನ್ ವರ್ಗವನ್ನು ಮನುಷ್ಯನಿಕ್ಕಿಂತ ಮುಂಚಿತವಾಗಿಯೇ ಅಲ್ಲಾಹನು ಸೃಷ್ಟಿಸಿರುವನೆಂದೂ ಅದನ್ನು ಮಲಾಯಿಕ (ದೇವಚರ)ರ ಮುಂದೆ ನಾನೊಂದು ಕೊಜ ಮಣ್ಣಿನಿಂದಿರುವ ಒಬ್ಬ ಮನುಷ್ಯನನ್ನು ಖಲೀಫಾನಾಗಿ ಭೂಮಿಯಲ್ಲಿ ಸೃಷ್ಟಿಸುವೆನೆಂದು ವಿವರಿಸಿದಾಗ ಅದಕ್ಕೆ ವೈರುಧ್ಯವಾಗಿ ನಿಂತ ಜಿನ್ನನ್ನು ಹೊರಗಟ್ಟಿದಾಗ್ಯೂ ಸೂರಃಅಲ್‌ಕಹಫ್ ಸೂಕ್ತ 50 ರಲ್ಲಿ.

)وَإِذْ قُلْنَا لِلْمَلَائِكَةِ اسْجُدُوا لِآدَمَ فَسَجَدُوا إِلَّا إِبْلِيسَ كَانَ مِنَ الْجِنِّ فَفَسَقَ عَنْ أَمْرِ رَبِّهِ ۗ أَفَتَتَّخِذُونَهُ وَذُرِّيَّتَهُ أَوْلِيَاءَ مِن دُونِي وَهُمْ لَكُمْ عَدُوٌّ ۚ بِئْسَ لِلظَّالِمِينَ بَدَلًا (50[54]

'ನೀವು ಆದಮ್‌ರಿಗೆ ಸಾಷ್ಟಾಂಗವೆರಗಿರಿ' ಎಂದು ನಾವು ಮಲಕ್‌ಗಳೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಅವರು ಸಾಷ್ಟಾಂಗ ಮಾಡಿದರು. ಇಬ್ಲೀಸನ ಹೊರತು. ಅವನು ಜಿನ್ನ್‌ಗಳಲ್ಲಿ ಸೇರಿದವನಾಗಿದ್ದನು. ತನ್ನಪ್ರಭುವಿನ ಆದೇಶವನ್ನು ಅವನು ಧಿಕ್ಕರಿಸಿದನು. ಅವರು ನಿಮ್ಮ ಶತ್ರುಗಳಾಗಿದ್ದೂ ಸಹ ನೀವು ನನ್ನ ಹೊರತು ಅವನನ್ನು ಮತ್ತು ಅವನ ಸಂತತಿಗಳನ್ನು ರಕ್ಷಕರನ್ನಾಗಿ ಮಾಡಿಕೊಳ್ಳುವಿರಾ? (ಅಲ್ಲಾಹುವಿಗೆ) ಬದಲಿಯಾಗಿ ಅಕ್ರಮಿಗಳಿಗೆ ದೊರಕಿದ್ದು ಎಷ್ಟು ನಿಕೃಷ್ಟವಾದುದು!

[54] ಸೂರಃಅಲ್‌ಕಹಫ್ ಸೂಕ್ತ 50

ಇಲ್ಲಿ ಸ್ಪಷ್ಟವಾಗಿ ತಿಳಿಯಲಾಗುವ ಸಂಗತಿ ಏನೆಂದರೆ ಮನುಷ್ಯನಿಗೆ ಸಾಷ್ಠಾಂಗ ಎರಗುವ ಬಗ್ಗೆ ಇರುವ ವಿಷಯ ಅದೊಂದು ಅಲ್ಲಾಹನ ಆಜ್ಞೆಯಾಗಿತ್ತು ಸರ್ವಲೋಕ ಪರಿಪಾಲಕನ ಆಜ್ಞೆಯನ್ನು ಪಾಲಿಸದವರು ಅವನಿಗೆ ಧಿಕ್ಕರಿಸಿದವಾಗಿರುವರು ಇಲ್ಲಿ ಧಿಕ್ಕಾರಿಯಾಗಿ ಪ್ರಕಟಗೊಂಡದ್ದು ಅಲ್ಲಾಹನ ಸೃಷ್ಟಿಗಳಲೊಂದಾದ ಜಿನ್ ವರ್ಗಕಕ್ಕೆ ಸೇರಿದ ಇಬ್ಲೀಸಿನಾಗಿರುವನು. ಈ ಲೋಕವನ್ನು ಸೃಷ್ಟಿಸಿರುವುದು ಸೃಷ್ಟಿಗಳಲ್ಲಿ ಅತ್ಯುನ್ನತನಾದ ಮನುಷ್ಯನಿಗೆಂದು ಅಲ್ಲಾಹನು ಹೇಳುವಾಗ ಇತರ ಎಲ್ಲಾ ಸೃಷ್ಟಿಗಳು ಅಲ್ಲಾಹನನ್ನು ಕೊಂಡಾಡಿ ಅವನ ಆಜ್ಞೆಯನ್ನು ಪಾಲಿಸಬೇಕಾಗಿರುವುದು ಸೃಷ್ಟಿಯ ಧರ್ಮವಾಗಿದೆ. ಅದನ್ನು ಧಿಕ್ಕರಿಸಿ ತೋರಿಸಿದವನು ಜಿನ್ ವರ್ಗಕ್ಕೆ ಸೇರಿದ ಧಿಕ್ಕಾರಿಯಾದ ಇಬ್ಲೀಸನಾಗಿರುವಾಗ ಮುನುಷ್ಯ ಮತ್ತು ಜಿನ್ ಗಳಿಗಿರುವ ವ್ಯತ್ಯಾಸ ತಿಳಿಯಬಹುದಲ್ಲವೇ? ಇಲ್ಲಿ ನೀವು 'ನೀವು ಆದಮ್‌ರಿಗೆ ಸಾಷ್ಟಾಂಗವೆರಗಿರಿ' ಎಂದು ನಾವು ಮಲಕ್‌ಗಳೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಎನ್ನುವುದನ್ನು 'ನೀವು ಆದಮ್‌ರಿಗೆ ಸಾಷ್ಟಾಂಗವೆರಗಿರಿ' ಎಂದು ನಾವು ದೇವಚರರೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಎಂದು ಕೆಲವು ಮುಫಸ್ಸಿರರು ಹೇಳಿದಂತೆ ಅರ್ಥೈಸಿದರೆ ಅಲ್ಲಾಹನ ಸೃಷ್ಟಿಗಳಲ್ಲಿ ಜಿನ್ ಮಾತ್ರ ಧಿಕ್ಕಾರಿಯಾಗಿ ಹೊರ ಹೊಮ್ಮುತ್ತಾನೆ. ಆದುದರಿಂದ ಅಲ್ಲಾಹನು ಇವನನ್ನೇ ಆಜನ್ಮ ಶತ್ರುವಾಗಿ ಮುನುಷ್ಯನಿಗೆ ಘುರ್‌ಖಾನುಲ್ ಅಳೀಂನಲ್ಲಿ ಆಗಾಗ ಎಚ್ಚರಿಗೆ ನೀಡಿರುವುದಾಗಿದೆ. ನೋಡಿರಿ ಸೂರಃ ಫಾತಿರ್ ಸೂಕ್ತ 6 ರಲ್ಲಿ

إِنَّ الشَّيْطَانَ لَكُمْ عَدُوٌّ فَاتَّخِذُوهُ عَدُوًّا ۚ إِنَّمَا يَدْعُوحِزْبَهُ لِيَكُونُوا مِنْ أَصْحَابِ السَّعِيرِ [55]

[55] ಸೂರಃ ಫಾತಿರ್ ಸೂಕ್ತ 6

"ಖಂಡಿತವಾಗಿಯೂ ಸೈತಾನನು ನಿಮಗೆ ಶತ್ರುವಾಗಿರುವನು. ಆದ್ದರಿಂದ ಅವನನ್ನು ಶತ್ರುವಾಗಿಯೇ ಪರಿಗಣಿಸಿರಿ. ನಿಶ್ಚಯವಾಗಿಯೂ (ಶೈತಾನನು)ಅವನ ಸಮೂಹವನ್ನು ಆಹ್ವಾನಿಸುತ್ತಿರುವುದು ಅವರು ನರಕವಾಸಿಗಳಲ್ಲಿ ಸೇರಿದವರಾಗಲು ಮಾತ್ರವಾಗಿದೆ".

ಈ ರೀತಿಯಾಗಿದೆ ಜಿನ್ ಮತ್ತು ಮನುಷ್ಯನ ಮಧ್ಯದಲ್ಲಿರುವ ಭಾಂದವ್ಯವಾಗಿದೆ. ಅದೇರೀತಿ ಮನುಷ್ಯನು ಜಿನ್ನಿನೊಂದಿಗಿರುವ ಸಂಬಧ ಅವಲಂಭನೆಯ ಮೂರು ರೀತಿಗಳಲ್ಲಿ

1. ಜಿನ್ ಮನುಷ್ಯನ ಪ್ರತ್ಯಕ್ಷ ಶತ್ರುವಾಗಿದ್ದಾನೆ.

ಇದು ಅಲ್ಲಾಹನ ಕುರ್ಆನಿನಲಿ. "ಅವರು ನಿಮ್ಮ ಶತ್ರುಗಳಾಗಿದ್ದೂ ಸಹ ನೀವು ನನ್ನ ಹೊರತು ಅವನನ್ನು ಮತ್ತು ಅವನ ಸಂತತಿಗಳನ್ನು ರಕ್ಷಕರನ್ನಾಗಿ ಮಾಡಿಕೊಳ್ಳುವಿರಾ?" ಎನ್ನುವ ವಚನದ ಆಧಾರದಲ್ಲಿ.

2. ಜಿನ್ನಿನ ಮತ್ತು ಮನುಷ್ಯನ ಸಂಬಂಧದ ಅವಲಂಭನೆಯ ಆಯ್ಕೆಯ ಬಗ್ಗೆ ನಾವು ಇಲ್ಲಿ ಕೆಲವು ಸೂಚನೆಗಳನ್ನೂ ನೀಡಿದ್ದೇವೆ.
3. ಜಿನ್ನಿನೊಂದಿಗೆ ಮನುಷ್ಯನ ಸಂಬಂಧ ಹಾಗು ಕಾರ್ಯಪ್ರಾಪ್ತಿಗೊಳಿಸಿ ಕೊಳ್ಳುವಿಕೆ ಇದರ ಬಗ್ಗೆ ಖುರ್ಆನಿನಲ್ಲಿ ಬಹಳಷ್ಟು ಸೂಕ್ತಗಳು ಕಂಡುಬರುತ್ತದೆ. ಅದರಲ್ಲಿ ಸೂರಃ ಅನ್ಆಮ್ ಸೂಕ್ತ 100 ರನ್ನುನೋಡಿರಿ.–

وَجَعَلُوا لِلَّهِ شُرَكَاءَ الْجِنَّ وَخَلَقَهُمْ ۖ وَخَرَقُوا لَهُ بَنِينَ وَبَنَاتٍ بِغَيْرِ عِلْمٍ ۚ سُبْحَانَهُ وَتَعَالَىٰ عَمَّا يَصِفُونَ [56]

[56] ಸೂರಃ ಅನ್ಆಮ್ ಸೂಕ್ತ 100

“ಅವರು ಜಿನ್ನ್‌ಗಳನ್ನು ಅಲ್ಲಾಹನಿಗೆ ಸಹಭಾಗಿಗಳಾಗಿ ಮಾಡಿರುವರು. ಅವನಾದರೋ ಅವರನ್ನು ಸೃಷ್ಟಿಸಿದವನಾಗಿರುವನು. ಅಜ್ಞಾನದಿಂದ ಅಲ್ಲಾಹನಿಗೆ ಪುತ್ರರು ಮತ್ತು ಪುತ್ರಿಯರಿರುವರೆಂದು ಆರೋಪಿಸಿದರು. ಅವರ ಈ ಆರೋಪದಿಂದ ಅವನು ಪರಿಶುದ್ಧನೂ ಉನ್ನತನೂ ಆಗಿರುವನು.”

**ಮತ್ತು ಸೂರಃ ಸಬಾ ಸೂಕ್ತ 41ರಲ್ಲಿಯೂ ನೋಡಿರಿ.**

قَالُوا سُبْحَانَكَ أَنتَ وَلِيُّنَا مِن دُونِهِم ۖ بَلْ كَانُوا يَعْبُدُونَ الْجِنَّ ۖ أَكْثَرُهُم بِهِم مُّؤْمِنُونَ [57]

‘ಅವರುಹೇಳಿದರು : ‘ನೀನು ಪರಿಶದ್ಧನು! ನಮ್ಮರಕ್ಷಕನು ನೀನೇ ಹೊರತು ಅವರಲ್ಲ. ಆದರೆ ಹಾಗಲ್ಲ, ಅವರು ಆರಾಧಿಸುತ್ತಿದ್ದುದು ಜಿನ್ನ್‌ಗಳನ್ನಾಗಿತ್ತು.[58] ಅವರಲ್ಲಿ ಹೆಚ್ಚಿನವರೂ ಜಿನ್ನ್‌ಗಳ ಮೇಲೆ ವಿಶ್ವಾಸ ವಿಟ್ಟವರಾಗಿದ್ದರು’.

ಸ್ಪಷ್ಟವಾದ ಈ ಆಯತ್ತಿನಿಂದ ಅಲ್ಲಾಹನನ್ನು ಆರಾಧಿಸುವುದರೊಂದಿಗೆ ಅವರು ಜಿನ್ ಗಳನ್ನು ಆರಾಧಿಸುತ್ತಿದ್ದಾರೆ ಅಲ್ಲದೇ ಅವರಲ್ಲಿ ಬಹಳಷ್ಟು ಜನ ಜಿನ್

---

[57] ಸೂರಃ ಸಬಾ ಸೂಕ್ತ 41

[58] ಮಲಕ್‌ಗಳನ್ನು ದೇವತೆಗಳೆಂದು ಪರಿಕಲ್ಪಿಸಿ ಆರಾಧಿಸುವ ಸಂಪ್ರದಾಯವು ಅನೇಕ ಜನಾಂಗಗಳಲ್ಲಿತ್ತು. ಅವರ ಹೆಸರಲ್ಲಿ ಸ್ಥಾಪಿಸಲಾಗುವ ವಿಗ್ರಹಗಳ ಮುಂದೆ ಇಂತಹ ಆರಾಧನೆಗಳು ನಡೆಯುತ್ತಿದ್ದವು. ಇದು ಮಲಕ್‌ಗಳ ಒಪ್ಪಿಗೆಯಿಂದ ಜರುಗುತ್ತಿರಲಿಲ್ಲ. ಆ ವಿಗ್ರಹಗಳ ಬಳಿ ಮಲಕ್‌ಗಳು ಉಪಸ್ಥಿತರಿರಲಿಲ್ಲ. ಅದರ ಹೊರತು ಶೈತಾನರುಗಳ (ಜಿನ್ನ್‌ಗಳ) ದುಷ್ಪ್ರೇರಣೆ ಮತ್ತು ಉಪಸ್ಥಿತಿಯು ಅಲ್ಲಿತ್ತು. ವಾಸ್ತವಿಕವಾಗಿ ಅಲ್ಲಿ ಆರಾಧಿಸಲಾಗುತ್ತಿದ್ದುದು ಶೈತಾನರನ್ನಾಗಿತ್ತು. ಈ ವಿಷಯವನ್ನು ಮಲಕ್‌ಗಳು ಸೂಚಿಸುತ್ತಿದ್ದಾರೆ. ಜನರು ತನ್ನನ್ನು ಆರಾಧಿಸುವುದನ್ನು ಯಾರಾದರೂ ಇಷ್ಟಪಡುವುದಾದರೆ ಮಾತ್ರ ಅವನು ಮಅ್‌ಬೂದ್ (ಆರಾಧ್ಯ) ಎಂಬ ದೆಸೆಯಲ್ಲಿ ಅಲ್ಲಾಹುವಿನ ಶಿಕ್ಷೆಗೆ ಅರ್ಹನಾಗುತ್ತಾನೆ. ಪ್ರವಾದಿ ಈಸಾ(ಅ)ಮುಂತಾದ ಮಹಾತ್ಮರು ಹಾಗೂ ಮಲಕ್‌ಗಳು ಆರಾಧಿಸಲಾಗುತ್ತಿದ್ದುದು ಅವರ ಒಪ್ಪಿಗೆ ಅಥವಾ ಅಂಗೀಕಾರದಿಂದಾಗಿರಲಿಲ್ಲ. ಅವರು ಅದನ್ನು ತಿಳಿಯುವುದು ಕೂಡಇಲ್ಲ. ಆದ್ದರಿಂದಲೇ ಅವರು ನಿರಪರಾಧಿಗಳಾಗಿದ್ದಾರೆ. ಮಲಕ್‌ಗಳ ಉತ್ತರದಲ್ಲಿ ಈ ನಿರಪರಾಧಿತ್ವವನ್ನು ಕೂಡ ಸೂಚಿಸಲಾಗಿದೆ.

ಸಹಾಯ ಮಾಡುವುದೆಂದು ವಿಶ್ವಾಸ ವಿರಿಸಿದವರಾಗಿರುವರು ಎನ್ನುವುದು ಅಲ್ಲಾಹನ ವಚನವಾಗಿದೆ.

ಇಂದು ನಾವು ನೋಡುವಂತೆ  ಬಹಳಷ್ಟು ಜನ ಇಸ್ಲಾಮಿನ ಮೂಲಭೂತ ತತ್ವವನ್ನು ಸ್ವೀಕರಿಸಿದ ನಂತರ ರೋಗ ರುಜಿನಗಳನ್ನು ಗುಣಪಡಿಸಲೊಸುಗ ಮಂತ್ರವಾದಿಗಳನ್ನು ಅರಸುತ್ತಾ ಹೋಗುವವರಿದ್ದಾರೆ. ಮಾಂತ್ರಿಕನು ತನ್ನ ಅಧೀನದಲ್ಲಿರುವ ಜಿನ್‌ನ ಸಹಾಯದಿಂದ ಕೆಲವು ವಿಷಯಗಳನ್ನು ನುಡಿದಾಗ ತಾವರಿಯದಯೇ ಅಜ್ಞಾನದಿಂದ ಅವರು ಅವುಗಳನ್ನು (ಜಿನ್‌ಗಳನ್ನು) ಸಹಾಯಕನಾಗಿ ಸ್ವೀಕರಿಸಿ ಕೊಳ್ಳುವರು.

ಕೆಲವೊಮ್ಮೆ ಮನುಷ್ಯನು ಜಿನ್‌ಗಳ ಉಪದ್ರವ ಇದೆಯೆಂದು ಭಾವಿಸಿ ಅವುಗಳ ಭಯವಿರುವುದರಿಂದ ಅವುಗಳಿಗೆ ಶರಣಾಗುತ್ತಾನೆ. ಅವುಗಳಲ್ಲಿ ಪ್ರಮುಖವಾಗಿರುವುದು.

**1 ಮುಂದೆ ಒದಗುವ ಉಪದ್ರದಿಂದ ಹೆದರಿಕೆ.**

**2 ನಿಜಾವಸ್ಥೆ ಅರಿಯಲು ಅಸಾಧ್ಯವಾದಗ ಉಂಟಾಗುವ ಭಯ**

**3 ಉಪದ್ರವ ನೀಗಿಸಲು ಅಸಾಧ್ಯವಾದಾಗ ಉಂಟಾಗುವ ಭಯ**

**4 ಎಲ್ಲಾ ಕಾರ್ಯಗಳು ಸುಗಮವಾಗಲಿ ಎನ್ನುವ ಹಂಬಲ**

**ಇವುಗಳು ಮನುಷ್ಯನನ್ನು ಜಿನ್‌ಗಳ ಸಹಾಯ ಪಡೆಯಲು ನೀಡುವಂತಹ ಪ್ರೇರಣೆಯ ಕಾರ್ಯಗಳಾಗಿವೆ. ಇವುಗಳೇ ಮನುಷ್ಯನನ್ನು ಅಲ್ಲಾಹನನ್ನು ಬಿಟ್ಟು ಇತರ ಜಿನ್‌ಗಳಂತಹುದನ್ನು ತಾವರಿಯದೇಯೋ ಅರಿತೋ ಆರಾಧಿಸಲು ಮನಸ್ಸಿನ ಮಸ್ತಿಸ್ಕದಲ್ಲಿ  ಬಂದೊದಗುವು ಹಲವು ರೀತಿಯ ಸನ್ನಿವೇಶಗಳು.**

**ಅಲ್ಲಾಹನ ಖುರ್‌ಆನ್ ಸೂರಃ ಅನ್‌ಆಮ್ 112 ನೆ ಸೂಕ್ತ ದಲ್ಲಿ**

وَكَذَٰلِكَ جَعَلْنَا لِكُلِّ نَبِيٍّ عَدُوًّا شَيَاطِينَ الْإِنسِ وَالْجِنِّ يُوحِي بَعْضُهُمْ إِلَىٰ بَعْضٍ زُخْرُفَ الْقَوْلِ غُرُورًا ۚ وَلَوْ شَاءَ رَبُّكَ مَا فَعَلُوهُ ۖ فَذَرْهُمْ وَمَا يَفْتَرُونَ [59]

'ಹೀಗೆ ನಾವು ಪ್ರತಿಯೊಬ್ಬ ಸಂದೇಶವಾಹಕನಿಗೂ ಮನುಷ್ಯರಲ್ಲಿ ಮತ್ತು ಜಿನ್ನ್‌ಗಳಲ್ಲಿ ಸೇರಿದ ಸೈತಾನರನ್ನು ಶತ್ರುಗಳನ್ನಾಗಿ ಮಾಡಿರುವೆವು. ವಂಚನಾತ್ಮಕವಾಗಿರುವ ಆಕರ್ಷಕ ಮಾತುಗಳನ್ನು ಅವರು ಪರಸ್ಪರ ದುರ್ಬೋಧನೆ ಗೈಯ್ಯುತ್ತಿರುವರು.[60] ತಮ್ಮ ಪ್ರಭು ಇಚ್ಛಿಸುತ್ತಿದ್ದರೆ ಅವರದನ್ನು ಮಾಡುತ್ತಿರಲಿಲ್ಲ. ಆದ್ದರಿಂದ ಅವರು ಹೆಣೆಯುತ್ತಿರುವ ವಿಷಯಗಳೊಂದಿಗೆ ಅವರನ್ನು ಬಿಟ್ಟು ಬಿಡಿರಿ.'

'ಅದು ಪರಲೋಕದಲ್ಲಿ ವಿಶ್ವಾಸವಿಡದವರ ಹೃದಯಗಳು ಅದರೆಡೆಗೆ (ಆಕರ್ಷಕ ಮಾತುಗಳೆಡೆಗೆ) ವಾಲುವುದಕ್ಕಾಗಿಯೂ, ಅವರು ಅದರಲ್ಲಿ ಸಂತೃಪ್ತರಾಗುವುದಕ್ಕಾಗಿಯೂ ಮತ್ತು ಅವರು ಮಾಡುತ್ತಿರುವುದೆಲ್ಲವನ್ನೂ ಮಾಡಿಕೊಂಡಿರುವುದಕ್ಕಾಗಿಯೂ ಆಗಿದೆ.[61]'

ಇಲ್ಲಿ ಮನುಷ್ಯ ಶ್ಯತಾನ ಮತ್ತು ಜಿನ್ನ್ ಶ್ಯತಾನರು ಒಂದುಗೂಡಿ ಇತರರನ್ನು ಪಥಭ್ರಷ್ಟತೆಯೆಡೆಗೆ ಕೊಂಡೊಯ್ಯಲೂ ಹಾಗೂ ಅಲ್ಲಾಹನ ದಾಸರೊಂದಿಗೆ

---

[59] ಸೂರಃ ಅನ್ಆಮ್ 112

[60] ಒಳಿತೆನೆಡೆಗೆ ಆಹ್ವಾನಿಸುವವರನ್ನು ಮತ್ತು ಕೆಡುಕಿನಿಂದ ತಡೆಯುವವರನ್ನು ಹೆಚ್ಚಿನವರೂ ಅಸಹ್ಯಪಡುತ್ತಾರೆ. ವಾಸ್ತವಿಕವಾಗಿ ಅವರು ಹಿತಾಕಾಂಕ್ಷಿಗಳಾದ ಮಿತ್ರರಾಗಿದ್ದಾರೆ. ಆದರೆ ಜನರನ್ನು ನೀಚಕೃತ್ಯಗಳಲ್ಲಿ ತಲ್ಲೀನರಾಗುವಂತೆ ಮಾಡಿ ಅವರನ್ನು ದಾರಿಗೆಡಿಸಿ, ಶೋಷಿಸಲು ಯತ್ನಿಸುವವರು ಆಕರ್ಷಕ ಮಾತುಗಳಿಂದ ದುರ್ಬೋಧನೆಗೈಯ್ಯುತ್ತಾರೆ. ಹೆಚ್ಚಿನವರೂ ಅವರನ್ನು ಪ್ರೀತಿಸುತ್ತಲೂ ಅವರಿಗೆ ನೆರವಾಗುತ್ತಲೂ ಇರುತ್ತಾರೆ. ವಾಸ್ತವಿಕವಾಗಿ ಅವರು ನಿಜವಾದ ಶತ್ರುಗಳಾಗಿದ್ದಾರೆ.

[61] ಪ್ರತಿಯೊಬ್ಬನಿಗೂ ಅವನು ಆರಿಸುವ ಕರ್ಮ ಮಾರ್ಗದ ಮೂಲಕ ಮುನ್ನಡೆಯಲು ಅಲ್ಲಾಹು ಅನುವು ಮಾಡಿಕೊಡುವನು. ಅವನು ಯಾರನ್ನೂ ಬಲವಂತವಾಗಿ ಸನ್ಮಾರ್ಗದಲ್ಲಿ ಸೇರಿಸುವುದಿಲ್ಲ. ಜನರನ್ನು ಬಲವಂತವಾಗಿ ಸನ್ಮಾರ್ಗಕ್ಕೆ ಸೇರಿಸಲು ಪ್ರವಾದಿ(ﷺ)ರವರಿಗೂ ಅದೇಶ ನೀಡಲಾಗಿಲ್ಲ.

ಯುದ್ಧಸಾರಲು ಸನ್ನದ್ಧರಾಗಿರುವರು ಎನ್ನುವ ಸತ್ಯವನ್ನು ಅಲ್ಲಾಹನು ತೆರೆದಿಟ್ಟಿರುತ್ತಾನೆ.

ಅದೇರೀತಿ ಎರಡು ಬಣಗಳ ನಡುವೆ ಇರುವ ಸಮಾಗಮ ಅಥವಾ ಮಾತುಕತೆ ಅಸಾದ್ಯವಾಗಿರುವುವು ಕಾರಣ ಒಬ್ಬ ದಾರ್ಷಿಕನಾದರೆ ಇನ್ನೊಬ್ಬ ಅದೃಷ್ಯನಾದವನಾಗಿರುತ್ತಾನೆ. ಈ ಇಬ್ಬರ ನಡುವೆ ಇರುವ ಸಂಭಾಷಣೆ ಅಸಾದ್ಯವಾದುದಾಗಿದೆ. ಇನ್ನು ಖುರ್ಆನ್ ಹೇಳಿದ ಹಾಗೆ "ಯೂಹೀ ಬಅಲುಹುಮ್ ಇಲಾ ಬಅಲಿನ್" ಜಿನ್‌ತನ್ನ ಸೇವಕನಿಗೆ ಅಥವಾ ಅರಾಧಕನಿಗೆ ಅಥವಾ ಹಿಂಬಾಲಕನಿಗೆ. ಅವನ ಹೃದಯಕ್ಕೆ ಕೆಲವು ಪೊಳ್ಳುವಾದಗಳನ್ನು ಇಳಿಸಿ ಗೊಂದಲಕ್ಕಿಡಾಗಿಸುವನು. ಅಂತಹಾ ಎಲ್ಲಾ ಮಾಗುತುಗಳು ಬಾತಿಲ್ ಆಗಿದೆ. ಮೂಮಿನ್ ಜಿನ್ನಿನ ಹೊರತು ಕೌಲುಲ್ ಹಕ್ಕ್ ಅವುಗಳಿಗೆ ಸಾದ್ಯವಾಗದ ವಿಷಯವಾಗಿದೆ ಆದರೆ ಅವು(ಮೂಮಿನ್ ಮತ್ತು ಕಾಫಿರ್ ಜಿನ್ನ್)ಗಳ ವ್ಯೆತ್ಯಾಸವು ಕಂಡುಕೊಳ್ಳಲು ಒಬ್ಬ ಮನುಷ್ಯನಿಗೆ ಅಸಾದ್ಯವಾದ ಕಾರ್ಯವೂ ಆಗಿದೆ.

## ಜಿನ್ನ್ ಮತ್ತು ಮನುಷ್ಯನಲ್ಲಿಯ ಸಮಾನತೆ:

ಈ ಎರಡು ಅಲ್ಲಾಹನ ಸೃಷ್ಟಿಗಳ ಸಮಾನತೆಯನ್ನು ತಿಳಿಯಲು ಖುರ್ಆನನ್ನು ಒಂದನೇ ಪ್ರಮಾಣವಾಗಿ ಇಟ್ಟುಕೊಳ್ಳಬೇಕಾಗಿದೆ. ಖುರ್ಆನಿನ ಸೂಕ್ತಗಳು ಜಿನ್ನ್ ಮತ್ತು ಮನುಷ್ಯನ ಸಮಾನತೆಯ ಬಗ್ಗೆ ಎಲ್ಲೆಲ್ಲಿ ಪ್ರಸ್ತಾಪಿಸುತ್ತದೆಯೋ ಅವುಗಳು ಮಾತ್ರ ನಮಗೆ ಪುರಾವೆಗಳಾಗಿವೆ.

ಪೃತ್ವಿಯಲ್ಲಿ ಮನುಷ್ಯನ ಅಸ್ತಿತ್ವವು ಯಾವರೀತಿಯಲ್ಲಿ ಸ್ವತಂತ್ರವಾಗಿ ತನ್ನಿಷ್ಟದಂತೆ ಬಾಳುವುದೋ ಜಿನ್ನ್ ನ ಅಸ್ತಿತ್ವವೂ ಅದೇ ರೀತಿಯಲ್ಲಿ ಇವೆ ಎಂಬುವುದನ್ನು ಖುರ್ಆನ್ ಸ್ಪಷ್ಟಪಡಿಸುತ್ತದೆ. ಮನುಷ್ಯನಿಗೆ ವಾಸ ಸ್ಥಳವು ಯಾವರೀತಿಲ್ಲಿ ಅಗತ್ಯವೋ ಹಾಗಯೇ ಜಿನ್ನ್ ಗಳಿಗೂ ಅತ್ಯಗತ್ಯವಾಗಿದೆ. ಮನುಷ್ಯನು

ಯಾವರೀತಿಯಲ್ಲಿ ಸಮೂಹದೊಂದಿಗೆ ಹೊಂದಿಕೊಂಡಿರುವವನೋ ಅದೇ ರೀತಿ ಜಿನ್ನ್‌ಗಳೂ ಸಮೂಹದೊಂದಿಗೆ ಹೊಂದಿಕೊಂಡಿವೆ.

ಇವಿಷ್ಟು ಕಾರ್ಯಗಳು ಮನುಷ್ಯನೊಂದಿಗೆ ಸಮಾನತೆ ಎಂಬ ವಿಷಯಗಳಲ್ಲಿ ಜಿನ್ನ್ ಗಳಿಗೂ ಸಮಾನತೆ ಇದೆ ಎಂದು ತಿಳಿಯುತ್ತದೆ. ಅಲ್ಲದೇ ಇಬ್ಬರನ್ನು ಮುಂದಿಟ್ಟು ಅಲ್ಲಾಹನು ಸೂರತುರ್ರಹ್ಮಾನ್ ನಲ್ಲಿ ಎಚ್ಚರಿಕೆಗಳ ಮೇಲೆ ಎಚ್ಚರಿಕೆಗಳನ್ನು ನೀಡುತ್ತಿರುವುದನ್ನು ನಾವು ನೋಡಬಹುದಾಗಿದೆ.

## ಜಿನ್ನ್ ಮತ್ತು ಮನುಷ್ಯನ ನಡುವೆ ಇರುವ ಅಸಮಾನತೆ:

ಜಿನ್ನ್ ಮತ್ತು ಮನುಷ್ಯನಲ್ಲಿರುವ ಸಮಾನತೆಯನ್ನು ನಾವು ತಿಳಿದುಕೊಂಡೆವು ಇನ್ನು ಇವುಗಳಲ್ಲಿರುವ ಅಸಮಾನತೆಯನ್ನು ತಿಳಿಯೋಣ.

1. ಮನುಷ್ಯನನ್ನು ಕೊಜ ಮಣ್ಣಿನಿಂದ ಸೃಷ್ಟಿಸಿದರೆ ಜಿನ್ನನ್ನು ಹೊಗೆ ರಹಿತ ಅಗ್ನಿಯ ಜ್ವಾಲೆಯಿಂದ ಸೃಷ್ಟಿಸಿರುವನು.
2. ಮಣ್ಣಿನಿಂದ ಸೃಷ್ಟಿಯಾದ ಮನುಷ್ಯನ ವೇಗಕ್ಕೆ ಮಿತಿಇದೆ ಆದರೆ ಜಿನ್ನಿನ ವೇಗದ ಸಾಮರ್ಥ್ಯವು ಮನುಷ್ಯನ ವೇಗದ ಸಾಮರ್ಥ್ಯಕ್ಕಿಂತ ಮೀರಿರುವುದಾಗಿದೆ.(ನೋಡಿರಿ ಸೂರ ಅಸ್ಸಾಫ್ಫಾತ್)
3. ಜಿನ್ನ್ ಮತ್ತು ಮನುಷ್ಯನ ಪರಸ್ಪರ ಸಮ್ಮಿಲನ ಅಸಾಧ್ಯವಾದುದಾಗಿದೆ. ಇದೇ ರೀತಿ ಹತ್ತು ಹಲವು ಅಸಮಾನತೆಗಳು ಖುರ್ಆನಿನಲ್ಲಿ ನಮಗೆ ಕಾಣಬಹುದಾಗಿದೆ.

<u>ಒಂದನೇ ರೀತಿ:</u>

ಮನುಷ್ಯ ಸೃಷ್ಟಿ ಮತು ಜಿನ್ನ್ ಸೃಷ್ಟಿ ಗಳ ಬಗ್ಗೆ ಅಲ್ಲಾಹನು ಖುರ್ಆನಿನಲ್ಲಿ ಹೇಳಿರುವುದು:

﴿وَالْجَانَّ خَلَقْنَاهُ مِن قَبْلُ مِن نَّارِ السَّمُومِ﴾ (27)

“ಜಿನ್ನ್‌ಗಳನ್ನು ನಾವು ಅದಕ್ಕಿಂತ(ಮನುಷ್ಯ ಸೃಷ್ಟಿಯ)ಮುಂಚೆಯೇ ಅತಿಶಾಖವಿರುವ ಅಗ್ನಿಜ್ವಾಲೆಯಿಂದ ಸೃಷ್ಟಿಸಿದೆವು”.[62]

ಖುರ್ಆನಿನ ಈ ಸೂಕ್ತದ ಆಧಾರದ ಮೇಲೆ ಮನುಷ್ಯ ಮತ್ತು ಜಿನ್ನ್‌ಗಳ ಅಸಮಾನತೆಯನ್ನು ಎತ್ತಿತೋರಿಸಲಾಗಿದೆ.

ಯಾವ ರೀತಿಯ ಅಗ್ನಿ ಎನ್ನುವುದರ ಬಗ್ಗೆ ಅಲ್ಲಾಹನು ಹೇಳುತ್ತಾನೆ:

﴿وَخَلَقَ الْجَانَّ مِن مَّارِجٍ مِّن نَّارٍ﴾ (15)

“ಅಗ್ನಿಯ ಹೊಗೆರಹಿತ ಜ್ವಾಲೆಯಿಂದ ಅವನು ಜಿನ್ನ್‌ಗಳನ್ನು ಸೃಷ್ಟಿಸಿದನು”.[63]

ಈ ಸೂಕ್ತವನ್ನು ಅವಲೋಕಿಸುವಾಗ ಅಲ್ಲಾಹನು ಯಾವರೀತಿಯಲ್ಲಿ ಮನುಷ್ಯವರ್ಗವನ್ನು ಯಾವ ರೀತಿಯಲ್ಲಿ ಶುದ್ಧ ಜೇಡಿಮಣ್ಣಿನಿಂದ ಸೃಷ್ಟಿಸಿರುವನೋ ಅದೇ ರೀತಿ. ಜಿನ್ನ್ ವರ್ಗವನ್ನೂ ಶುದ್ಧವಾದ ಅಗ್ನಿಯಿಂದ ಸೃಷ್ಟಿಸಿರುವನು. ಇಲ್ಲಿ ಮನುಷ್ಯ ಮತ್ತು ಜಿನ್ನ್‌ಗಳಿಗಿರುವು ಅಸಮಾನತೆ ಸುವ್ಯಕ್ತವಾಗಿರುತ್ತದೆ.

**ಎರಡನೇ ರೀತಿ:**

ಅಲ್ಲಾಹನು ಸೂರ ಅಸ್ಸಾಫ್ಫಾತಿನ 7 ರಿಂದ 8 ರವರೆಗಿರುವ ಆಯತ್ತಿನಲ್ಲಿ ಅವರ ವೇಗವನ್ನು ಸ್ಫೋಟಿಸುವ ಅಗ್ನಿಜ್ವಾಲೆಗಳ ವೇಗಕ್ಕೆ ಹೋಲಿಸಿ ಹೇಳುವನು:

---

[62] ಸೂರಃ ಅಲ್ ಹಿಜ್ರ್–27

[63] ಸೂರಃ ಅರ್ರಹ್ಮಾನ್ –15

وَحِفْظًا مِّن كُلِّ شَيْطَانٍ مَّارِدٍ (7) لَّا يَسَّمَّعُونَ إِلَى الْمَلَإِ الْأَعْلَىٰ وَيُقْذَفُونَ
مِن كُلِّ جَانِبٍ (8) دُحُورًا ۖ وَلَهُمْ عَذَابٌ وَاصِبٌ (9) إِلَّا مَنْ خَطِفَ
الْخَطْفَةَ فَأَتْبَعَهُ شِهَابٌ ثَاقِبٌ(10)

ಧಿಕ್ಕಾರಿಗಳಾಗಿರುವ ಸರ್ವ ಸೈತಾನರಿಂದಲೂ ನಾವು (ಅದನ್ನು) ಸಂರಕ್ಷಿಸಿರುವೆವು.

ಅತ್ಯುನ್ನತವಾದ ವಿಭಾಗಡೆಗೆ[64] ಕಿವಿಗೊಟ್ಟು ಆಲಿಸಲು ಅವರಿಗೆ (ಸೈತಾನರಿಗೆ) ಸಾಧ್ಯವಾಗದು. ಸರ್ವದಿಕ್ಕುಗಳಿಂದಲೂ ಅವರನ್ನು ಎಸೆದು ಓಡಿಸಲಾಗುವುದು. ಅವರಿಗೆ ಶಾಶ್ವತ ಶಿಕ್ಷೆಯೂ ಇರುವುದು.

ಆದರೆ, ಯಾರಾದರೂ ಹಠಾತ್ತನೆ ಕದ್ದಾಲಿಸಿದರೆ ಧಗಧಗಿಸುವ ಒಂದು ಅಗ್ನಿಜ್ವಾಲೆಯು ಅವನನ್ನು ಹಿಂಬಾಲಿಸುವುದು.

**ಮೂರನೇ ರೀತಿ:**

ಅಸಮಾನತೆಯ ಮೂರನೇ ರೀತಿಯಲ್ಲಿ ಅವುಗಳನ್ನು ನೋಡಲಾಧ್ಯವಾಗಿರುವುದು. ಅಲ್ಲಾಹನು ಖುರ್ಆನಿನಲ್ಲಿ ವಿಶೇಷವಾಗಿ ಪ್ರಸ್ತಾಪಿಸಿರುವನು:

﴿إِنَّهُ يَرَاكُمْ هُوَ وَقَبِيلُهُ مِنْ حَيْثُ لَا تَرَوْنَهُمْ﴾ (27)

“ಖಂಡಿತವಾಗಿಯೂ ನೀವು ಅವರನ್ನು ನೋಡಲಸಾಧ್ಯವಾದಂತಹ ವಿಧದಲ್ಲಿ ಅವನು ಮತ್ತು ಅವನ ಪಂಗಡದವರು ನಿಮ್ಮನ್ನು ನೋಡುತ್ತಿರುವರು”.[65]

---

[64] ಅತ್ಯುನ್ನತ ವಿಭಾಗ ಎಂದರೆ ಅಲ್ಲಾಹುವಿನ ಸಾಮೀಪ್ಯವನ್ನು ಗಳಿಸಿದ ಮಲಕ್‌ಗಳಾಗಿದ್ದಾರೆ. ಅವರ ಮಾತನ್ನು ಆಲಿಸಲು ಅಲ್ಲಾಹು ಶೈತಾನರಿಗೆ ಅನುಮತಿ ನೀಡಲಾರನು.

[65] ಸೂರಃ ಅಲ್ ಆರಾಫ್ –27

ಅವನಾದರೋ ಮನುಷ್ಯನನ್ನು ಸುಲಭವಾಗಿ ವೀಕ್ಷಿಸುವನು ಅದೇ ರೀತಿ ಮನುಷ್ಯನಿಗೆ ಅವನನ್ನು ವೀಕ್ಷಿಸಲಾಗದು.

ಅದೇ ರೀತಿ ಇನ್ನೂ ಹಲವು ಕಾರಣಗಳು ಉಲಮಾಅರು ಅಸಮಾನತೆಯ ಬಗ್ಗೆ ವಿವರಿಸುವುದನ್ನು ನೋಡಲು ಸಾಧ್ಯವಾಗುವುದು.

## ಇಬ್ಲೀಸ್:

ಜಿನ್ನ್ ಅಥವಾ ಶೈತಾನ್ ಇವುಗಳಲ್ಲಿ ಅತೀ ಕುಪ್ರಸಿದ್ಧವಾಗಿ ಅರಿಯಲ್ಪಡುವವನಾಗಿದ್ದಾನೆ ಇಬ್ಲೀಸ್. ಅಲ್ಲಾಹನ ಆಜ್ಞೆಯನ್ನು ತಿರಸ್ಕರಿಸಿ ಅಂತ್ಯದಿನದವರೆಗೆ ಮನುಷ್ಯನ ಶತ್ರುವಾಗಿದ್ದಾನೆ. ಇಬ್ಲೀಸ್ ಎನ್ನುವ ಪ್ರಸ್ತಾಪ ಅಲ್ಲಾಹನು ಖುರ್ಆನಿನಲ್ಲಿ ಹನ್ನೊಂದು ಬಾರಿ ತಂದಿರುವನು. ಇಬ್ಲೀಸನು ಜಿನ್ನ್ ವರ್ಗದಲ್ಲಿ ಸೇರಿದವನಾಗಿರುವನು.

وَإِذْ قُلْنَا لِلْمَلَائِكَةِ اسْجُدُوا لِآدَمَ فَسَجَدُوا إِلَّا إِبْلِيسَ كَانَ مِنَ الْجِنِّ فَفَسَقَ عَنْ أَمْرِ رَبِّهِ ۗ أَفَتَتَّخِذُونَهُ وَذُرِّيَّتَهُ أَوْلِيَاءَ مِن دُونِي وَهُمْ لَكُمْ عَدُوٌّ ۚ بِئْسَ لِلظَّالِمِينَ بَدَلًا [66]

'ನೀವು ಆದಮ್‌ರಿಗೆ ಸಾಷ್ಟಾಂಗವೆರಗಿರಿ' ಎಂದು ನಾವು ಮಲಕ್‌ಗಳೊಂದಿಗೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಅವರು ಸಾಷ್ಟಾಂಗ ಮಾಡಿದರು. ಇಬ್ಲೀಸನ ಹೊರತು. ಅವನು ಜಿನ್ನ್‌ಗಳಲ್ಲಿ ಸೇರಿದವನಾಗಿದ್ದನು. ತನ್ನಪ್ರಭುವಿನ ಆದೇಶವನ್ನು ಅವನು ಧಿಕ್ಕರಿಸಿದನು. ಅವರು ನಿಮ್ಮ ಶತ್ರುಗಳಾಗಿದ್ದೂ ಸಹ ನೀವು ನನ್ನ ಹೊರತು ಅವನನ್ನು ಮತ್ತು ಅವನ ಸಂತತಿಗಳನ್ನು ರಕ್ಷಕರನ್ನಾಗಿ ಮಾಡಿಕೊಳ್ಳುವಿರಾ? (ಅಲ್ಲಾಹುವಿಗೆ) ಬದಲಿಯಾಗಿ ಅಕ್ರಮಿಗಳಿಗೆ ದೊರಕಿದ್ದು ಎಷ್ಟು ನಿಕೃಷ್ಟವಾದುದು!

---

[66] ಸೂರಃ ಅಲ್ ಕಹ್ಫ್–50

ಸರ್ವಶಕ್ತನಾದ ಅಲ್ಲಾಹನು ತಾನು ಸೃಷ್ಟಿಸಿದ ಮಾನವರಲ್ಲಿ ಪ್ರಥಮರಾದ ಆದಮ್(ಅ)ರವರಿಗೆ ಸಾಷ್ಟಾಂಗವೆರಗಲು ಅಜ್ಞಾಪಿಸಿದ ಆಜ್ಞೆಯಲ್ಲಿ ಇಬ್ಲೀಸನು ಸೇರಿದ್ದನು.

فان إبليس كان مع الملائكة في السماء يعبد الله وكانت الملائكة تظن انه منهم ولم يكن منهم، فلما أمر الله الملائكة بالسجود لآدم اخرج ما كان في قلب إبليس من الحسد، فعلمت الملائكة عند ذلك ان إبليس لم يكن منهم[67]

ಇಬ್ಲೀಸನು ದೇವಚರರೊಂದಿಗೆ ಆಕಾಶಲೋಕದಲ್ಲೇ ಅಲ್ಲಾಹನನ್ನು ಆರಾಧಿಸುತ್ತಾ ಜೀವಿಸುತಿದ್ದು ಇವನ ಆರಾಧನೆಯ ವೈಖರಿಯನ್ನು ಕಂಡು ದೇವಚರರು ಇವನೂ ನಮ್ಮವನೇ ಎಂದು ಭಾವಿಸಿದ್ದರು. ನಿಜವಾಗಿ ಇಬ್ಲೀಸನು ದೇವಚರರಲ್ಲಿ ಸೇರಿದವನಾಗಿರಲಿಲ್ಲ. ಆದಮ್(ಅ)ರವರಿಗೆ ಸಾಷ್ಟಾಂಗವೆರಗಲು ಅಲ್ಲಾಹನು ಅಜ್ಞಾಪಿಸಿದಾಗ ಅಸೂಯೆಯಿಂದಾಗಿ ಇಬ್ಲೀಸನು ಆ ಅಜ್ಞಾಪನೆಯನ್ನು ಕಡೆಗಣಿಸಿ ಅಲ್ಲಿಂದ ಹೊರನಡೆದನು. ತರುವಾಯ ಈ ಘಟನೆಯಿಂದಾಗಿ ಇಬ್ಲೀಸನು ನಮ್ಮವರಲ್ಲಿ ಸೇರಿದವನಲ್ಲ ಎನ್ನುವ ವಿಷಯ ದೇವಚರರು ಅರಿತುಕೊಂಡರು.

ಸಂಕ್ಷಿಪ್ತವಾಗಿ ಜಿನ್ನ್ ಅಂದರೆ ಏನು ಮತ್ತು ಅವುಗಳ ಬದುಕಿನ ರೂಪರೇಖೆ ಹಾಗು ಮನುಷ್ಯ ಮತ್ತು ಜಿನ್ನಿನಲ್ಲಿರುವ ವೆತ್ಯಾಸಗಳೂ ಅರಿತುಕೊಂಡೆವು.

## ಇಸ್ತಿಆನಃ, ಇಸ್ತಿಗಾಸಃ, ಇಸ್ತಿಆಝಃ

[67] ಅಲ್ ಬುರುಹಾನ್ ಫೀ ತಫ್ಸೀರುಲ್ ಖುರ್ಆನ್–ಪುಟ:188(ಅಲ್ಲಾಮ ಅಲ್ ಮುಹದ್ದಿಸ್ ಸೆಯ್ಯಿದ್ ಹಾಷಿಮ್ ಮರಣ ಹಿಜರಿ:1107)

ಈ ಮೂರು ಪದಗಳು ಅಲ್ಲಾಹನೊಂದಿಗಿರುವ ಸಹಾಯ ಮತ್ತು ದೃಢತೆಯೊಂದಿಗೆ ಮರಳುವುದಾಗಿದೆ ಇದರಲ್ಲಿರುವ ವೆತ್ಯಾಸವನ್ನು ಉಲಮಾಅರು ವಿವರಿಸಿರುವರು.

## 1. ಅಲ್ ಇಸ್ತಿಆನಃ ಸಹಾಯ ಯಾಚನೆ:

ಒಂದು ವಸ್ತುವನ್ನು ಅವಲಂಬಿಸಿ ಆವಶ್ಯಕತೆಯನ್ನು ನೆರವೇರಿಸುವುದಕ್ಕಾಗಿ ಇರುವ ಒಂದು ಮಾರ್ಗ. ಅಥವಾ ಒಂದನ್ನು ಪಡೆದುಕೊಳ್ಳುವುದಕ್ಕಾಗಿ ಇನ್ನೊಂದರ ಸಹಾಯವನ್ನು ಪಡೆಯುವುದಕ್ಕಾಗಿದೆ ಇಸ್ತಿಆನಃ( ಸಹಯಾ ಯಾಚನೆ) ಎನ್ನುವುದು

أولاً: الاستعانة: وهي طلب العون من الله تعالى في أمور الدنيا والآخرة، والتبرؤ من الحول والقوة والتفويض إليه، كما قال الله تعالى: فَاعْبُدْهُ وَتَوَكَّلْ عَلَيْهِ [هود:123].

وفي وصيته صلى الله عليه وسلم لابن عباس: وإذا استعنت فاستعن بالله. رواه الترمذي.

قال في تحفة الأحوذي: وإذا استعنت أي أردت الاستعانة في الطاعة وغيرها من أمور الدنيا والآخرة فاستعن بالله، فإنه المستعان، وعليه التكلان.

ಮೊದಲನೇಯದಾಗಿ ಇಸ್ತಿಆನಃ(ಸಹಾಯಪಡೆಯುವುದು) ಅದು ಲೌಕಿಕವಾದ ಮತು ಪಾರತ್ರಿಕವಾದ ಸಹಾಯವನ್ನು ಅಲ್ಲಾಹನಲ್ಲಿ ಬೇಡುವುದಾಗಿದೆ ಅಲ್ಲಾಹನ ಶಕ್ತಿಯಿಂದ ನಮಗೆ ಸಿಗುವ ಕಾಣಿಕೆ ಹಾಗೂ ಅಲ್ಲಾಹನ ಬಳಿಯ ಪರವಾನಿಗೆ ಯಾಗಿರುತ್ತದೆ. ಅಲ್ಲಾಹನು ಹೇಳಿದಹಾಗೆ: '..ಆದ್ದರಿಂದ ತಾವು ಅವನನ್ನು(ಅಲ್ಲಾಹನನ್ನು) ಆರಾಧಿಸಿರಿ ಮತ್ತು ಅವನ ಮೇಲೆ ಭರವಸೆಯಿಡಿರಿ.

ನೀವು ಮಾಡುತ್ತಿರುವುದರ ಕುರಿತು ತಮ್ಮ ಪ್ರಭು ಅಲಕ್ಷ್ಯನಲ್ಲ.'[68] ಪ್ರವಾದಿ(ಸ)ರವರ ವಸೀಯತ್ ಇಬ್ನು ಅಬ್ಬಾಸ್ (ರ) ರವರಿಗೆ. ಸಹಾಯವನ್ನು ಯಾಚಿಸುವುದಾದರೆ ಅಲ್ಲಾಹನಲ್ಲಿ ಮಾತ್ರ ಸಹಾಯ ಯಾಚಿಸು.[69] ಸಫೀಯುರ್‍ರಹ್ಮಾನ್ ಮುಬಾರಕ್ ಪುರಿ ಯವರು ಹೇಳುತ್ತಾರೆ: ನೀ ಲೌಕಿಕ ಮತ್ತು ಪಾರತ್ರಿಕದ ಕಾರ್ಯಗಳ ಬಗ್ಗೆ ಸಹಾಯ ಯಾಚಿಸುವುದಾದರೆ ಅಂದರೆ ವಿನಂಮ್ರತೆ ಇತ್ಯಾದಿಗಳಲ್ಲಿ ಸಹಾಯವನ್ನು ಉದ್ಧೇಶಿಸಿದರೆ ಅಲ್ಲಾಹನಲ್ಲಿ ಮಾತ್ರ ಯಾಚಿಸು ಕಾರಣ ಅವನಾಗಿದ್ದಾನೆ ಸಹಾಯಿ ಅವನಲ್ಲಾಗಿದೆ ಭರವಸೆ.[70]

ثانيا: الاستغاثة: وهي طلب الغوث من الله تعالى في الشدائد والأزمات، كما في قوله تعالى: إِذْ تَسْتَغِيثُونَ رَبَّكُمْ فَاسْتَجَابَ لَكُمْ[71].

قال ابن كثير: لما كان يوم بدر نظر النبي صلى الله عليه وسلم إلى قلة أصحابه وكثرة عدوهم، فما زال يستغيث ربه حتى سقط رداؤه عن منكبيه، فأنزل الله تعالى: إِذْ تَسْتَغِيثُونَ رَبَّكُمْ فَاسْتَجَابَ لَكُمْ. الآية.

## 2.ಅಲ್ ಇಸ್ತಿಗಾಸ ಪರಿಹಾರ ಬೇಡುವಿಕೆ:

ಪ್ರತಿಕೂಲ, ಬಿಕಟ್ಟು, ಗಳಲ್ಲಿ ಅಲ್ಲಾಹನಲ್ಲಿ ಮಾತ್ರ ಪರಿಹಾರ ಯಾಚಿಸುವುದಾಗಿದೆ ಅಲ್ ಇಸ್ತಿಗಾಸಃ ಈ ಪರಿಹಾರದ ಬಗ್ಗೆ ಅಲ್ಲಾಹನು ಹೇಳುತ್ತಾನೆ: 'ನೀವು ನಿಮ್ಮ ಪ್ರಭುವಿನೊಂದಿಗೆ ಪರಿಹಾರವನ್ನು ಬೇಡುತ್ತಿದ್ದ ಸಂದರ್ಭ(ವನ್ನು ಸ್ಮರಿಸಿರಿ). ಆಗ ಸಾವಿರ ಮಲಕ್‌ಗಳನ್ನು ನಿರಂತರವಾಗಿ

---

68 ಸೂರಃ ಹೂದ್–123

69 ತುರ್ಮುಝೀ–2706

70 ತುಹ್ಫತುಲ್ ಅಹ್ವಝ್

71 ಸೂರಃ ಅಂಫಾಲ್–9

ಕಳುಹಿಸುವ ಮೂಲಕ ನಾನು ನಿಮಗೆ(ಸಂಕಷ್ಟಗಳ) ಪರಿಹಾರ ಮಾಡಿರುವೆನೆಂದು ಅವನು ನಿಮಗೆ ಉತ್ತರವಿತ್ತನು.' ಇಬ್ನು ಕಸೀರ್ ಹೇಳುತ್ತಾರೆ: ಬದರ್ ಯುದ್ಧದ ದಿವಸ ಶತ್ರು ಪಾಳಯದಲ್ಲಿಯವರಿಗಿಂತ ನನ್ನ ಅನುಯಾಯಿ(ಸ್ವಹಾಬತ್ತರು) ಕಡಿಮೆ ಯಾಗಿರುವುದರಿಂದ ಅಲ್ಲಾಹನಲ್ಲಿ ಹೊರ ವಸ್ತ್ರವು ಹೆಗಲಿಂದ ಬೀಳುವವರೆಗೆ ಪರಿಹಾರ ಬೇಡುತಿದ್ದರು ಅವಾಗ ಅಲ್ಲಾಹನು ಈ ಆಯತ್ತನ್ನು ಅವತೀರ್ಣಗೊಳಿಸಿದನು.

ثالثاً: الاستعاذة: وهي طلب كف الشر، ومنه قوله تعالى: فَإِذَا قَرَأْتَ الْقُرْآنَ فَاسْتَعِذْ بِاللَّهِ مِنَ الشَّيْطَانِ الرَّجِيمِ [النحل:98]. ومنه حديث: من استعاذ بالله فأعيذوه، ومن سألكم فأعطوه، ومن دعاكم فأجيبوه. رواه الإمام أحمد وأبو داود. قال في عون المعبود: من استعاذ بكم.. أي طلب منكم دفع شركم أو شر غيركم قائلاً: بالله عليك أن تدفع عني شَرَّك، فأجيبوه وادفعوا عنه الشر تعظيماً لاسم الله تعالى. انتهى.والله أعلم.

## 3.ಅಲ್ ಇಸ್ತಿಆಝಃ ಅಭಯ ಪಡೆಯುವುದಾಗಿದೆ:

ಆಶ್ರಯ, ಅಭಯ; ದುಷ್ಪ್ರೇರಣೆಯಿಂದ ಅಲ್ಲಾಹನಲ್ಲಿ ಆಶ್ರಯಪಡೆಯುವುದಾಗಿದೆ. ಅಲ್ಲಾಹನು ಹೇಳುತ್ತಾನೆ: 'ತಾವು ಕುರ್ಆನ್

ಪಾರಾಯಣ ಮಾಡುವುದಾದರೆ ಬಹಿಷ್ಕೃತನಾದ ಸೈತಾನನಿಂದ ಅಲ್ಲಾಹನೊಂದಿಗೆ ಅಭಯವನ್ನು ಯಾಚಿಸಿರಿ.'[72]

ನಮಗೆ ಈ ಮೂರರಲ್ಲಿ ಅಲ್ ಇಸ್ತಿಆನಃ ಸಹಾಯ ಯಾಚನೆ ಮುಖ್ಯ ಉದ್ದೇಶವಾಗಿರುವುದಾಗಿದೆ. ಇಸ್ತಿಆನತು ಬಿಲ್ ಜಾನ್(ಜಿನ್ನ್)

ಜಿನ್ನಿನೊಂದಿಗಿರುವ ಸಹಾಯ ಹಲವಾರು ವಿಭಾಗಗಳಲ್ಲಿ ಇವೆ ಎಂದು ಉಲಮಾಅರ ಅಭಿಪ್ರಾಯಗಳು ನೋಡಲು ಸಾದ್ಯವಾಗಿದ್ದು.

1. ಖುರ್ಆನಿನಲ್ಲಿ ಜಿನ್ನಿನೊಂದಿಗಿರುವ ಸಹಾಯದ ಬಗ್ಗೆ
2. ಹದೀಸ್ ನಲ್ಲಿ ಜಿನ್ನಿನೊಂದಿಗಿರುವ ಸಹಾಯದ ಬಗ್ಗೆ
3. ಮುಸ್ಲಿಂ ಜಿನ್ನಿನೊಂದಿಗಿರುವ ಸಹಾಯ, ರೋಗ ಚಿಕಿಸ್ತೆಗಾಗಿ ಜಿನ್ನಿನೊಂದಿಗೆ ಸಹಾಯ, ಸಿಹ್ರ್ ನೀಗಿಸಲು ಜಿನ್ನಿನೊಂದಿಗೆ ಸಹಾಯ
4. ಜಿನ್ನಿನೊಂದಿಗಿರುವ ಸಹಾಯಗಳ ಬಗ್ಗೆ ಅಹ್ಲುಲ್ ಇಲ್ಮಿನವರಲ್ಲಿಯ ಅಭಿಪ್ರಾಯ

## ಖುರ್ಆನಿಲ್ಲಿ ಜಿನ್ನಿನೊಂದಿಗೆ ಸಹಾಯ ಪಡೆಯುವುದರ ಬಗ್ಗೆ:

ಅಲ್ಲಾಹು ಸುಬ್ಹಾನಹು ಜಿನ್ನ್ ಸೈನ್ಯವನ್ನು ಸುಲೈಮಾನ್ (ಅ)ರ ಅಧೀನಕ್ಕೆ ಒಳಪಡಿಸಿ ಕೊಟ್ಟಿರುವುದು ನಮಗೆ ಖುರ್ಆನಿನಲ್ಲಿ ಕಾಣಲಾಗುವ ದಾರ್ಷನಿಕ ಸತ್ಯವಾಗಿದೆ. ಇದನ್ನು ಪುರಾವೆಯಾಗಿಸಿ ಬಹಳಷ್ಟು ಜನರು ಜಿನ್ನಿನೊಂದಿಗಿರುವ ಸಹಾಯ ನಿಷಿದ್ಧವಲ್ಲ ಅದನ್ನು ಅಲ್ಲಾಹು

---

[72] ಸೂರಃ ಅನ್ನಹ್ಲ್–98

ಸುಲೈಮಾನ್(ಅ)ರಿಗೂ ಜಿನ್ನನ್ನು ಅಧೀನಗೊಳಿಸಿಕೊಟ್ಟಿರುವನು ಅಲ್ಲಾಹನು ಸುಲೈಮಾನ್ (ಅ)ರಿಗೆ ಅವರ ದುವಾದ ಫಲವಾಗಿ ನೀಡಿದ ಮುಅಜಿಝತ್ ಆಗಿರುತ್ತದೆ ಅವರ ದುವಾ ಹೀಗಿತ್ತು:

﴿قَالَ رَبِّ اغْفِرْ لِي وَهَبْ لِي مُلْكًا لَّا يَنبَغِي لِأَحَدٍ مِّن بَعْدِي ۖ إِنَّكَ أَنتَ الْوَهَّابُ﴾

ಅವರು (ಸುಲೈಮಾನ್ (ಅ) ಹೇಳಿದರು; "ನನ್ನೊಡೆಯಾ, ನನ್ನನ್ನು ಕ್ಷಮಿಸು ಮತ್ತು ನನ್ನ ಬಳಿಕ ಯಾರಿಗೂ ನೀಡಲಾಗದಂತಹ ಸಾಮ್ರಾಜ್ಯವನ್ನು ನನಗೆ ದಯಪಾಲಿಸು. ನಿಶ್ಚಯವಾಗಿಯೂ ನೀನು ಉದಾರಿಯಾಗಿರುವೆ"

ಈ ದುವಾದ ಫಲವಾಗಿ ಅಲ್ಲಾಹನು ಸುಲೈಮಾನ್ (ಅ)ರಿಗೆ ಬಗಳಷ್ಟು ಅನುಗ್ರಹವನ್ನು ಕೊಟ್ಟನು ಅದರಲ್ಲೊಂದು ಜಿನ್ನ್ ವರ್ಗವನ್ನು ಅವರಿಗೆ ಅಧೀನವಾಗಿಸಿ ಕೊಟ್ಟಿರಿವುದು.

﴿وَحُشِرَ لِسُلَيْمَانَ جُنُودُهُ مِنَ الْجِنِّ وَالْإِنْسِ وَالطَّيْرِ فَهُمْ يُوزَعُونَ﴾-17 النمل

ಸುಲೈಮಾನ್‌ರಿಗಾಗಿ ಜಿನ್ನ್, ಮನುಷ್ಯರು ಮತ್ತು ಹಕ್ಕಿಗಳಲ್ಲಿ ಸೇರಿದ ಅವರ ಸೈನ್ಯಗಳನ್ನು ಒಟ್ಟುಗೂಡಿಸಲಾಯಿತು. ಅವರನ್ನು ಕ್ರಮಬದ್ಧವಾಗಿ

ನಿಲ್ಲಿಸಲಾಗಿತ್ತು. ಇದು ಅಲ್ಲಾಹನ ವತಿಯಿಂದ ಹೊರತು ಸುಲೈಮಾನ್(ಅ)ರ ಕಡೆಯಿಂದಲ್ಲ.ಯಾವ ಪ್ರವಾದಿಗೂ ಕೊಡದ ಏಕಮಾತ್ರ ಪ್ರವಾದಿ ಸುಲೈಮಾನ್(ಅ)ರಿಗೆ ಅನುಗ್ರಹಿಸಿದ ಮುಅಜಿಝುತ್ತಾಗಿತ್ತು .

ಅವರ ಕಾರ್ಯ ಪ್ರವರ್ತಿಗೆ ಜಿನ್ನ್ ವರ್ಗಗಳಲ್ಲಿಯ ಮಾಹಾ ಇಫರೀತರು ಆಜ್ಞಾಪಾಲಕರಾಗಿದ್ದರು. ಅಲ್ಲಾಹನು ಹೇಳುತ್ತಾನೆ:

﴿وَمِنَ الْجِنِّ مَنْ يَعْمَلُ بَيْنَ يَدَيْهِ بِإِذْنِ رَبِّهِ﴾ 12− سبإ

ಅವರ ಪ್ರಭುವಿನ ಅಪ್ಪಣೆ ಪ್ರಕಾರ ಅವರ ಕಣ್ಮುಂದೆ ಜಿನ್ನ್‌ಗಳ ಪೈಕಿ ಕೆಲವರು ಕೆಲಸ ಮಾಡುತ್ತಿರುವರು.

﴿قَالَ عِفْرِيتٌ مِنَ الْجِنِّ أَنَا آتِيكَ بِهِ قَبْلَ أَنْ تَقُومَ مِنْ مَقَامِكَ﴾− 39 النمل

ಜಿನ್ನ್‌ಗಳಲ್ಲಿದ್ದ ಒಬ್ಬ ಬಲಶಾಲಿ ಹೇಳಿದನು: ‘ತಾವು ತಮ್ಮ ಆಸನದಿಂದ ಎದ್ದೇಳುವ ಮುನ್ನವೇ ಅದನ್ನು ನಾನು ತಮ್ಮ ಬಳಿಗೆ ಅರ್ಪಿಸುವೆನು.

ಇಲ್ಲಿ ಪ್ರತ್ಯೇಖವಾಗಿ ಗಮನಿಸಬೇಕಾದ ಅಂಶ ಸುಲೈಮಾನರಿಗೆ ಜಿನ್ನಿನ ಅಧೀನ ಅಲ್ಲಾಹನ ಆಜ್ಞೆಯಂತೆಯಾಗಿದೆ. ಇಂದಿರು ಮಾಂತ್ರಿಕರು, ಜಿನ್ನ್ ಅಧೀನಗೊಳಿಸುವವರು ಜಿನ್ನ್ ಗಳಿಗೆ ಸೇವೆ ಮಾಡಿದಾಗಲೇ ಅವುಗಳು ಇವರಿಗೆ ಅಧೀನ ಗೊಳ್ಳುವುದು. ಸುಲೈಮಾನ್ ಅಲೈಹಿಸ್ಸಲಾಮ್ ರವರ ಮತ್ತು ಇತರರ ಅಧೀನತೆಯಲ್ಲಿ ವ್ಯೆತ್ಯಾಸಗಳಿವೆ ಎನ್ನುವುದು ಗಮನದಲ್ಲಿಟ್ಟುಕೊಳ್ಳಬೇಕಾದ ಆಂಶವಾಗಿರುತ್ತದೆ.

ಜಿನ್ನನ್ನು ಕರೆದು ಸಹಾಯ ಕೇಳುವವರು ಹೇಳುವರು ಆಡುವ ಒಂದು ಮಾತಾಗಿದೆ ಅವುಗಳಿಗೆ ಅದೃಷ್ಯಜ್ಞಾನ ಏದೆ ಎನ್ನುವುದು ಇದನ್ನು ನಾವು ಮೊದಲೇ ಸವಿವರವಾಗಿ ತಮಗೆ ತಿಳಿಯಪಡಿಸಿರುವೆವು ಅವುಗಳಿಗೆ

ಅದೃಶ್ಯಜ್ಞಾನವಿಲ್ಲವೆಂದು ಅದನ್ನೇ ಅಲ್ಲಾಹನು ಖುರ್ಆನಿನಲ್ಲಿ ಸಂಶಯನಿವಾರಣೆ ಮಾಡಿರುವನು:

﴿فَلَمَّا خَرَّ تَبَيَّنَتِ الْجِنُّ أَنْ لَوْ كَانُوا يَعْلَمُونَ الْغَيْبَ مَالَبِثُوا فِي الْعَذَابِ الْمُهِينِ﴾ 14 سبإ

ತರುವಾಯ ಅವರು ನೆಲಕ್ಕುರುಳಿದಾಗ ನಮಗೆ ಅಗೋಚರ ವಿಷಯಗಳು ಅರಿಯುತ್ತಿದ್ದರೆ ಅವಮಾನಕರವಾದ ಶಿಕ್ಷೆಯಲ್ಲಿ73 ಕಳೆಯಬೇಕಾಗಿರಲಿಲ್ಲ ಎಂದು ಜಿನ್ನ್‌ಗಳು ಅರಿತುಕೊಂಡರು.

ಇಲ್ಲಿ ಸ್ಪಷ್ಟವಾಗಿ ತಿಳಿಯಲಾಗುವ ಒಂದು ವಿಷಯವು ಅದೃಷ್ಯಜ್ಞಾನ ಜಿನ್ನಿಗಳಿಗಿಲ್ಲವೆಂದೂ ಜಿನ್ನ್ ಗಳ ಸಹಾಯ ಅಲ್ಲಾಹನ ಮುಅಜಿಝುತ್ತಿನಿಂದ ದೊರಕಿರುವ ಪ್ರತ್ಯೇಖ ಅನುಗ್ರಹವೆಂದೂ ಸ್ಪಷ್ಟ. ಇನ್ನು ಅಲ್ಲಾಹನು ಹೇಳುತ್ತಾನೆ:

﴿لَعَنَهُ اللَّهُ وَقَالَ لأَتَّخِذَنَّ مِنْ عِبَادِكَ نَصِيباً مَفْرُوضاً﴾[74]

ಅಲ್ಲಾಹು ಅವನನ್ನು (ಸೈತಾನನನ್ನು) ಶಪಿಸಿರುವನು. ಅವನು (ಅಲ್ಲಾಹುವಿನೊಂದಿಗೆ) ಹೇಳಿದನು: 'ನಿನ್ನ ದಾಸರ ಪೈಕಿ (ನನಗಾಗಿರುವ) ಒಂದು ನಿಶ್ಚಿತ ವಿಭಾಗವನ್ನು ನಾನು ಪಡೆದೇ ತೀರುವೆನು.

[73] ನಿರ್ಮಾಣ ಕೆಲಸವನ್ನು ಅವಿಶ್ರಾಂತವಾಗಿ ಮತ್ತು ಬಲವಂತವಾಗಿ ಮಾಡಬೇಕಾಗಿ ಬಂದುದರಿಂದ ಜಿನ್ನ್‌ಗಳು ಅದನ್ನೊಂದು ಶಿಕ್ಷೆಯೆಂದೇ ಪರಿಗಣಿಸಿದ್ದರು.

[74] ಸೂರಃ ಅನ್ನಿಸಾ 118

قَوْلُهُ تَعَالَى: (وَقالَ لَأَتَّخِذَنَّ مِنْ عِبادِكَ نَصِيباً مَفْرُوضاً) أَيْ وَقَالَ الشَّيْطَانُ، وَالْمَعْنَى: لَأَسْتَخْلِصَنَّهُمْ بِغِوَايَتِي وَأُضِلَّنَّهُمْ بِإِضْلَالِي، وَهُمُ الْكَفَرَةُ وَالْعُصَاةُ. وَفِي الْخَبَرِ (مِنْ كُلِّ أَلْفٍ وَاحِدٌ لِلَّهِ وَالْبَاقِي لِلشَّيْطَانِ)..

ಅಂದರೆ ಶೈತಾನನು ಹೇಳಿರುವನು ನನ್ನ ಪಥಭ್ರಷ್ಟತೆಯ ಮಾರ್ಗದೊಂದಿಗೆ ನಿನಗೆ ಆರಾಧನೆ ಮಾಡುವುದರಿಂದ ತಡೆದು ನನ್ನ ದಾರಿಗೆ ಕರೆದು ಪಥಭ್ರಷ್ಟತೆಗೊಳಿಸುವೆನು, ಅವರು ಕುಫ್ಫಾರರು ಮತ್ತು ಪಾಪವೆಸಗುವವರು, ಒಂದು ವರದಿಯ ಪ್ರಕಾರ: "ಸಾವಿರದಲ್ಲಿ ಒಬ್ಬರು ಅಲ್ಲಾಹನಿಗೆ ಬಾಕಿ ಇರುವವರು ಶೈತಾನನಿಗೆ"[75]

وَهَذَا صَحِيحٌ مَعْنًى، يُعَضِّدُهُ قَوْلُهُ تَعَالَى لِآدَمَ يَوْمَ الْقِيَامَةِ: (ابْعَثْ بَعْثَ النَّارِ)فَيَقُولُ مِنْ كُلِّ أَلْفٍ تِسْعُمِائَةٍ وَتِسْعَةٌ وَتِسْعِينَ أَخْرَجَهُ مُسْلِمٌ. وَبَعْثُ النَّارِ هُوَ نَصِيبُ الشَّيْطَانِ. وَاللَّهُ أَعْلَمُ. وَقِيلَ: مِنَ النَّصِيبِ طَاعَتُهُمْ إِيَّاهُ فِي أَشْيَاءَ، مِنْهَا أَنَّهُمْ كَانُوا يَضْرِبُونَ لِلْمَوْلُودِ مِسْمَارًا عِنْدَ وِلَادَتِهِ، وَدَوَرَانِهِمْ بِهِ يَوْمَ أُسْبُوعِهِ، يَقُولُونَ: لِيَعْرِفَهُ العمار

ನಾನು ಹೇಳುತ್ತೇನೆ: ಈ ಅರ್ಥ ಇಲ್ಲಿ ಸರಿಯಾಗಿದೆ; ಅಲ್ಲಾಹನು ಖಿಯಾಮತ್ತಿನಂದು ಹೇಳುವ ಮಾತು, "ಅಗ್ನಿಯ ವಿಭಾಗದವರನ್ನು ಹೊರಡಿಸಿರಿ " ಆದಮ್ ಅಲೈಹಿಸ್ಸಲಾ ಕೇಳುತ್ತಾರೆ 'ಅಗ್ನಿಯ ವಿಭಾಗ ಎಷ್ಟು?' ಅಲ್ಲಾಹನು ಹೇಳುವನು: "ಎಲ್ಲಾ ಸಹಸ್ರದಿಂದ ಒಂಬ್ಯನೂರ

[75] ತಫ್ಸೀರ್ ಖುರ್ತುಬೀ –5/388

ತೊಂಬತ್ತೊಬ್ಬತ್ತು"[76] ಇದನ್ನು ಇಮಾಮ್ ಮುಸ್ಲಿಂ ವರದಿ ಮಾಡಿರುವರು ಬಅಸುನ್ನಾರ್ ಎಂದಿರುವುದು ಶೈತಾನನ ಪಾಲಾಗಿದೆ. ಅಲ್ಲಾಹನು ಹೇಚ್ಚು ಬಲ್ಲವನು[77]

وَقِيلَ: مِنَ النَّصِيبِ طَاعَتُهُمْ إِيَّاهُ فِي أَشْيَاءَ، مِنْهَا أَنَّهُمْ كَانُوا يَضْرِبُونَ لِلْمَوْلُودِ مِسْمَارًا عِنْدَ وِلَادَتِهِ، وَدَوَرَانِهِمْ بِهِ يَوْمَ أُسْبُوعِهِ، يَقُولُونَ: لِيَعْرِفَهُ العمار

ಕೆಲವು ಉಲಮಾಅರ ಮಾತಿನಂತೆ: ಇದರ ಉದ್ದೇಶ ಬಹಳಷ್ಟು ಕಾರ್ಯಗಳಲ್ಲಿ ಶೈತಾನ(ಜಿನ್ನ)ನ್ನು ಹಿಂಬಾಲಿಸುವುದಾಗಿದೆ. ಉಧಾಹರಣೆಗೆ ಮಕ್ಕಳ ಜನನ ಸಮಯದಲ್ಲಿ ಒಂದು ಮೊಳೆಯನ್ನು ಹೊಡೆಯುತ್ತಿದ್ದರು ಏಳನೇ ದಿವಸದಂದು ಅದನ್ನು ತಿರುಗಿಸುತ್ತದ್ದರು ಜಿನ್ನ್ ಗಳಿಗೆ (ಈ ಮನೆಯಲ್ಲಿ ಮಗು ಜನಿಸಿರುವ ವಿವರ ಅರಿಯಲೆಚಿದು)[78].

ಒಂದು ಚಿಕ್ಕ ಪ್ರರ್ವತಿಯನ್ನೇ ಮಾಡಿರುವಂತಹವರನ್ನು ಶೈತಾನನ ವಿಭಾಗದವರು ಎಂದು ಹೆಸರಿಸಿರುವುದನ್ನು ನೋಡಿದರೆ ಇನ್ನು ಜಿನ್ನನ್ನು ಕರೆದು ಒಂದು ಕರ್ಜೂರ ತಾ ಎಂದರೆ ಹೇಗೆ!? ಮುಂದುವರಿಯುತ್ತಾ ಸೂರತು ಅನ್ನಿಸಾಅ ನಲ್ಲಿ ಅಲ್ಲಾಹನು ವಿವರಿಸುವುದನ್ನು ನೋಡಿರಿ.

﴿وَلَأُضِلَّنَّهُمْ وَلَأُمَنِّيَنَّهُمْ وَلَآمُرَنَّهُمْ فَلَيُبَتِّكُنَّ آذانَ الْأَنْعامِ وَلَآمُرَنَّهُمْ فَلَيُغَيِّرُنَّ خَلْقَ اللَّهِ وَمَنْ يَتَّخِذِ الشَّيْطانَ وَلِيًّا مِنْ دُونِ اللَّهِ فَقَدْ خَسِرَ خُسْراناً مُبِيناً ﴾

76 ಸಹೀಹುಲ್ ಬುಖಾರಿ ಕಿತಾಬು ರಿಖಾಕ್, ಭಾಗ–2 ಪುಟ:967 ಹದೀಸ್ ಸಂಖ್ಯೆ–3099

77 ತಫ್ಸೀರು ಖುರ್ತುಬೀ–5\388

78 ತಫ್ಸೀರು ಖುರ್ತುಬೀ–5\388

"ಖಂಡಿತವಾಗಿಯೂ ನಾನು ಅವರನ್ನು ದಾರಿ ಗೆಡಿಸುವೆನು ಮತ್ತು ಮಿಥ್ಯಕಲ್ಪನೆಗೊಳಪಡಿಸುವೆನು ಖಂಡಿತವಾಗಿಯೂ ನಾನು ಅವರೊಂದಿಗೆ ಆದೇಶಿಸುವೆನು. ಆಗ ಅವರು ಜಾನುವಾರುಗಳ ಕಿವಿಗಳನ್ನು ಹರಿಯುವರು.[79] ಖಂಡಿತವಾಗಿಯೂ ನಾನು ಅವರೊಂದಿಗೆ ಆದೇಶಿಸುವೆನು. ಆಗ ಅವರು ಅಲ್ಲಾಹುವಿನ ಸೃಷ್ಟಿ (ಪ್ರಕೃತಿ) ಯನ್ನು ಬದಲಾಯಿಸುವರು.'[80] ಯಾರು ಅಲ್ಲಾಹುವಿನ ಹೊರತು ಸೈತಾನನನ್ನು ರಕ್ಷಕನಾಗಿ ಮಾಡಿಕೊಳ್ಳುವನೋ ಖಂಡಿತವಾಗಿಯೂ ಅವನು ಸ್ಪಷ್ಟವಾದ ನಷ್ಟಕ್ಕೀಡಾಗಿರುವನು."

ಅಲ್ಲಾಹನ ಹೊರತು ಶೈತಾನ(ಜಿನ್ನ)ನ್ನು ರಕ್ಷಕನಾಗಿ ಮಾಡಿಕೊಳ್ಳುವನೋ ಅವನಿಗೆ ಕೇಡಾಗಿದೆ ಎಂದು ಅಲ್ಲಾಹನು ಸವಿಸ್ತಾರವಾಗಿ ಹಲವಾರು ಉಪಮೆಗಳಿಂದ ವಿವರಿಸುತ್ತಿರುವಾಗ ಜಿನ್ನ್‌ಗಳನ್ನು ರಕ್ಷಣೆಗಾಗಿ ಕರೆಯುವುದು ಅಲ್ಲಾಹನಲ್ಲಿ ಯುದ್ಧಸಾರುವುದಕ್ಕೆ ಸಮಾನವಲ್ಲವೇ? ಜಿನ್ನಿನ ಮಾತು ವಾದಗಳು ಮಿಥ್ಯೆಯಾಗಿರುತ್ತದೆ ಶೈತಾನನು ಸತ್ಯ ಹೇಳುವವನೇ ಅಲ್ಲ ಇನ್ನು ಸಂಕಲ್ಪಿಸಿ ಕೊಂಡು ಹೇಳುವುದಾದರೆ ಜಿನ್ನ್ ಒಂದೊಮ್ಮೆ ಎಲ್ಲಾದರೂ ಸತ್ಯ ಹೇಳಿದರೆ ಅದರ ಹಿಂದೆ ಏನಾದರೂ ಮಿಥ್ಯೆ ಅಡಗಿರಬಹುದು. ಅಲ್ಲಾಹನು ಹೇಳುತ್ತಾನೆ:

﴿يَعِدُهُمْ وَيُمَنِّيهِمْ وَمَا يَعِدُهُمُ الشَّيْطَانُ إِلَّا غُرُورًا * أُولَئِكَ مَأْوَاهُمْ جَهَنَّمُ وَلَا يَجِدُونَ عَنْهَا مَحِيصًا﴾

---

79 ಕೆಲವು ಆರಾಧ್ಯರಿಗೆ ಹರಕೆಯಾಗಿ ಸಲ್ಲಿಸಲ್ಪಟ್ಟ ಒಂಟೆಗಳನ್ನು ಗುರುತಿಸಲು ಅರಬರು ಅವುಗಳ ಕಿವಿಗಳನ್ನು ಕತ್ತರಿಸುತ್ತಿದ್ದರು.

80 ಅಲ್ಲಾಹು ಸರ್ವ ವಸ್ತುವನ್ನೂ ಸಂತುಲಿತ ಪ್ರಕೃತಿಯೊಂದಿಗೆ ಸೃಷ್ಟಿಸಿರುವನು. ಮಾನವ ಜೀವನವು ಕೂಡ ಈ ಪ್ರಕೃತಿನಿಯಮಗಳಿಗೆ ಒಳಪಟ್ಟಿದೆ. ಪ್ರಕೃತಿ ನಿಯಮಗಳಿಗೆ ವಿರುದ್ಧವಾದ ಯಾವುದೇ ಪ್ರವೃತ್ತಿಯೂ ದುಷ್ಪರಿಣಾಮಗಳನ್ನು ಉಂಟುಮಾಡುತ್ತವೆಯಾದ್ದರಿಂದ ಅದು ನಿಷಿದ್ಧವಾಗಿದೆ. ಪ್ರಕೃತಿ ವಿರುದ್ಧ ಲೈಂಗಿಕತೆ ಮತ್ತು ಸ್ವೇಚ್ಛೆಗಳಿಂದುಂಟಾಗುವ ದುಷ್ಪರಿಣಾಮಗಳು ಇಂದು ನಿಷೇಧಿಸಲಾಗದ ಸತ್ಯವಾಗಿ ದೃಢಪಟ್ಟಿವೆ.

ಅವನು (ಶೈತಾನನು) ಅವರಿಗೆ ವಾಗ್ದಾನ ಮಾಡುವನು ಮತ್ತು ಅವರನ್ನು ಮಿಥ್ಯಕಲ್ಪನೆಗೊಳಪಡಿಸುವನು. ಅವರಿಗೆ ಸೈತಾನನು ವಾಗ್ದಾನ ಮಾಡುವುದು ವಂಚನೆಯ ವಿನಾ ಇನ್ನೇನೂ ಆಗಿರಲಾರದು.

* ಅಂತಹವರ ವಾಸಸ್ಥಳವು ನರಕಾಗ್ನಿಯಾಗಿದೆ. ಅದರಿಂದ ಪಾರಾಗಲು ಯಾವ ದಾರಿಯನ್ನೂ ಅವರು ಕಾಣಲಾರರು.[81]

﴿وَمَا كَانَ لِمُؤْمِنٍ وَلَا مُؤْمِنَةٍ إِذَا قَضَى اللَّهُ وَرَسُولُهُ أَمْرًا أَن يَكُونَ لَهُمُ الْخِيَرَةُ مِنْ أَمْرِهِمْ وَمَنْ يَعْصِ اللَّهَ وَرَسُولَهُ فَقَدْ ضَلَّ ضَلالا مُبِينًا﴾

ಅಲ್ಲಾನು ಮತ್ತು ಅವನ ಸಂದೇಶವಾಹಕರು ಒಂದು ವಿಷಯವನ್ನು ತೀರ್ಮಾನಿಸಿದ ಬಳಿಕ ಸತ್ಯವಿಶ್ವಾಸಿಗಾಗಲಿ, ಸತ್ಯವಿಶ್ವಾಸಿನಿಗಾಗಲಿ ತಮ್ಮ(ಸ್ವತಃ)ವಿಷಯಕ್ಕೆ ಸಂಬಂಧಿಸಿ ಸ್ವತಂತ್ರ ಅಭಿಪ್ರಾಯವಿರುವುದು ಯುಕ್ತವಲ್ಲ. ಯಾರು ಅಲ್ಲಾಹನನ್ನು ಮತ್ತು ಅವನ ಸಂದೇಶವಾಹಕರನ್ನು ಧಿಕ್ಕರಿಸುವನೋ ಅವನು ಸ್ಪಷ್ಟವಾದ ಪಥಭ್ರಷ್ಟತೆಯಲ್ಲಿರುವನು.[82]

ಅಲ್ಲಾಹನ ಭಯವಿರುವ ಒಬ್ಬನಿಗೆ ಈ ಸೂಕ್ತವು ಶಾಸನವಾಗಿರುವುದು ಇದನ್ನು ತೊರೆದು ಮುಂದುವರಿಯಲು ಧೈರ್ಯತೋರಲಾರನು ಅಹಂಕಾರ ಲೋಕಮಾನ್ಯತೆಯನ್ನು ಬದಿಗೊತ್ತಿ ಕೋಡಲೇ ಅಲ್ಲಾಹನ ವಚನವನ್ನು ಸ್ವೀಕರಿಸುವನು ಎನ್ನುವುದರಲ್ಲಿ ಅಭಿಪ್ರಾಯವಿಲ್ಲ. ಎಲ್ಲಾ ಕಡೆಗಳಲ್ಲೂ ಜಿನ್ನನ್ನು ಆರಾಧಿಸಲೋ ಅವುಗಳೇನಾದರೂ ಸಹಾಯ ಮಾಡುವವೋ ಎನ್ನುವ ಇಅತಿಕಾದ್ (ವಿಶ್ವಾಸ)ಅಲ್ಲಾಹನೊಂದಿಗಿರುವ (ಶಿರ್ಕ್)ಸಹಭಾಗಿತ್ವವಾಗಿರುವುದಾಗಿ ಖುರ್ಆನ್ ಮತ್ತು ಹದೀಸುಗಳಿಂದ ಸ್ಪಷ್ಟವಾಗುವುದಾಗಿದೆ. ಮುಂದೆ ಅಲ್ಲಾಹನು ಹೇಳುತ್ತಾನೆ:

[81] ಸೂರತು ಅನ್ನಿಸಾಅ–120–121

[82] ಸೂರತು ಅಲ್ ಅಹ್ಝಾಬ್–36

﴿وَجَعَلُوا لِلَّهِ شُرَكَاءَ الْجِنَّ وَخَلَقَهُمْ وَخَرَقُوا لَهُ بَنِينَ وَبَنَاتٍ بِغَيْرِ عِلْمٍ﴾

"ಅವರು ಜಿನ್ನ್‌ಗಳನ್ನು ಅಲ್ಲಾಹನಿಗೆ ಸಹಭಾಗಿಗಳಾಗಿ ಮಾಡಿಕೊಂಡಿರುವರು. ಆದರೆ ಅವರನ್ನು ಸೃಷ್ಟಿಸಿದವನು ಅವನಾಗಿರುವನು. ಅವನಿಗೆ ಪುತ್ರರು ಮತ್ತು ಪುತ್ರಿಯರಿರುವರೆಂದು ಯಾವ ಅರಿವೂ ಇಲ್ಲದೆ ಅವರು ಆರೋಪಿಸಿರುವರು."[83]

ಮುಶ್ರಿಕರ ಮೇಲೆ ಅವತೀರ್ಣವಾದ ಆಯತ್ತಾಗಿದೆ. ಅಂದು ಪ್ರವಾದಿ ಸ.ರವರು ಅಲ್ಲಾಹನ ಏಕದೇವತ್ವಸಾರುವ ಸಮಯ ಬಗೆಬಗೆಯ ಆಚಾರ ವಿಚಾರಗಳು ಅಲ್ಲಿತ್ತು ಕೆಲವರು ಅಲ್ಲಾಹನಿಗೆ ಪುತ್ರ ಪ್ಮತ್ರಿಯರಿರುವರೆಂದು ಆರೋಪಗಳನ್ನು ಹಣೆದರೆ ಕೆಲವರು ಈಸಾ ಅ. ರವರು ಅಲ್ಲಾಹನ ಪುತ್ರನೆಂದು ಆರೋಪಗಳನ್ನು ಹಣೆದರು ಕೆಲವರು ಅಲ್ಲಾಹನಿಗೆ ಸಹಪಾಟಿಗಳನ್ನು ನಿರ್ಮಿಸಿದರು ಇವರೆಲ್ಲರೂ ಅಜ್ಞಾನದಿಂದ ಅಲ್ಲಾಹನಲ್ಲಿರುವ ವಿಶ್ವಾಸದ ನಂತರ ಇವರುಗಳನ್ನು ಸಹಪಾಟಿಗಳಾಗಿ ನಿಯೋಗಿಸಿದ್ದರು ಇವರನ್ನು ಎದುರಿಸುತ್ತಾ ಪ್ರವಾದಿ ಸ. ಏಕದೇವ ವಾದವನ್ನು ಅದ್ವ್ಯತನೆಂದೂ ಸಾರುತ್ತಾ ಇರುವಾಗ ಅಲ್ಲಾಹನು ಅಲ್ಲಾಹನ ದೃಷ್ಟಾಂತವಾದ ಆಯಾತ್ ಗಳನ್ನು ಅವತೀರ್ಣಿಸುತಿದ್ದನು. ಆಯಾತುಗಳನ್ನು ಆಲಿಸುತ್ತಿರುವವರಲ್ಲಿ ಕೆಲವರ ಹೃದಯಗಳಲ್ಲಿ ಅಲ್ಲಾಹನ ಮೇಲಿರುವ ವಿಶ್ವಾಸದ ಚಿಲುಮೆಯು ಚಿಮ್ಮಿ ಅದೇ ಸಮಯದಲ್ಲಿ ಇಸ್ಲಾಮ್ ಸ್ವೀಕರಿಸುತ್ತಿದ್ದರೆ ಕಲೆವರು ಅವಕಾಶಗಳನ್ನು ಹುಡುಕುತಿದ್ದರು ಹ್ರದಯವು ಕಲ್ಲಾದ ಮನುಷ್ಯರು ಅಲ್ಲಾಹನಿಗೆ ಸಹಪಾಟಿಗಳನ್ನು ಹಣೆಯುತ್ತಾ ಶಿರ್ಕ್ ನಲ್ಲಿ ಮುಂದುವರಿದರು. ಇಮಾಮ್ ಕುರ್ತುಬೀ[84] ರಹಿಮಹುಲ್ಲಾಹ್ ಹೇಳುತ್ತಾರೆ:

---

[83] ಸೂರತು ಅನ್ ಆಮ್–100

[84] ಅಬೂ ಅಬದಿಲ್ಲಾಹ್ ಮುಹಮ್ಮದ್ ಬಿನ್ ಅಹ್ಮದ್ ಬಿನ್ ಅಬೀ ಬಕರ್ ಬಿನ್ ಫರಹ್ ಅಲ್ ಅನ್ಸಾರೀ ಅಲ್ ಖಝುರಜೀ ಶಂಸುದ್ದೀನ್ ಅಲ್ ಕುರ್ತುಬಾ. ಮರಣ–ಹಿಜರಿ 671

وَقَالَ أَهْلُ اللُّغَةِ: مَعْنَى" خَرَقُوا" اخْتَلَقُوا وَافْتَعَلُوا" وَخَرَقُوا" عَلَى التَّكْثِيرِ. قَالَ مُجَاهِدٌ وَقَتَادَةُ وَابْنُ زَيْدٍ وَابْنُ جُرَيْجٍ:" خَرَقُوا" كَذَبُوا. يُقَالُ: إِنَّ مَعْنَى خَرَقَ وَاخْتَرَقَ وَاخْتَلَقَ سواء، أي أحدث.

ಭಾಷಾಪಂಡಿತರು ಹೇಳಿರುವರು. 'خَرَقُوا ಅಂದರೆ' ಅವರು ಅಭಿಪ್ರಾಯ ವ್ಯಕ್ತಪಡಿಸಿದರು ಅವರು ಮಾಡಿದರು. ಎಂದಾಗಿದೆ. خَرَقُوا ಎನ್ನುವುದ ತಪ್ಪು ಗಳನ್ನು ಎತ್ತಿತೋರಿಸುತ್ತದೆ. ಮುಜಾಹಿದ್, ಕತಾದಃ, ಇಬ್ನ್ ಝುಬ್ಯರ್, ಮತ್ತು ಇಬ್ನ್ ಜುರ್ಯಜ್ ರಹಿಮಹುಮುಲ್ಲಾಹ್ ಹೇಳುತ್ತಾರೆ خَرَقُوا ಅಂದರೆ ಅವರು ಸುಳ್ಳು ಹೇಳಿದರೆಂದಾಗಿದೆ. ಹಾಗೂ ಕೆಲವರು ಹೇಳುವಂತೆ ಉಂಟುಮಾಡಿದನು, ಸುಳ್ಳುಹೇಳಿದನು ಎಂದಾಗಿದೆ.[85]

﴿ وَيَوْمَ يَحْشُرُهُمْ جَمِيعًا يَا مَعْشَرَ الْجِنِّ قَدِ اسْتَكْثَرْتُمْ مِنَ الْإِنْسِ وَقَالَ أَوْلِيَاؤُهُمْ مِنَ الْإِنْسِ رَبَّنَا اسْتَمْتَعَ بَعْضُنَا بِبَعْضٍ وَبَلَغْنَا أَجَلَنَا الَّذِي أَجَّلْتَ لَنَا قَالَ النَّارُ مَثْوَاكُمْ خَالِدِينَ فِيهَا إِلَّا مَا شَاءَ اللَّهُ إِنَّ رَبَّكَ حَكِيمٌ عَلِيمٌ ﴾

ಅವನು (ಅಲ್ಲಾಹು) ಅವರೆಲ್ಲರನ್ನೂ ಒಟ್ಟುಗೂಡಿಸುವ ದಿನ. (ಅವನು ಜಿನ್ನ್‌ಗಳೊಂದಿಗೆ ಹೇಳುವನು): 'ಓ ಜಿನ್ನ್ ಸಮೂಹವೇ! ಮನುಷ್ಯರ ಪೈಕಿ ಅನೇಕ ಜನರನ್ನು ನೀವು ದಾರಿಗೆಡಿಸಿರುವಿರಿ.'[86] ಮನುಷ್ಯರಲ್ಲಿ ಸೇರಿದ ಅವರ ಆಪ್ತಮಿತ್ರರು ಹೇಳುವರು: 'ನಮ್ಮ ಪ್ರಭೂ! ನಮ್ಮಲ್ಲಿ ಕೆಲವರು ಇತರ

---

[85] 'ತಫ್ಸೀರು ಜಾಮಿಉಲ್ ಅಹ್ಕಾಮುಲ್ ಖುರ್ಆನ್' -7/52

[86] ಜಿನ್ನ್‌ಗಳಲ್ಲಿ ಸೇರಿದ ಸೈತಾನರು ನಾವು ತಿಳಿಯದ ರೀತಿಯಲ್ಲಿ ನಮ್ಮನ್ನು ದಾರಿಗೆಡಿಸಲು ಸದಾ ಪ್ರಯತ್ನಿಸುತ್ತಿರುವರೆಂದು ಕುರ್ಆನ್ ನಮಗೆ ಎಚ್ಚರಿಕೆ ನೀಡಿದೆ.

ಕೆಲವರಿಂದ ಲಾಭಗಳನ್ನು ಪಡೆದಿರುವರು.[87] ತರುವಾಯ ನೀನು ನಮಗೆ ನಿಶ್ಚಯಿಸಿದ ಅವಧಿಯನ್ನು ನಾವು ತಲುಪಿರುವೆವು.' ಅವನು ಹೇಳುವನು: 'ನರಕಾಗ್ನಿಯೇ ನಿಮ್ಮ ವಾಸಸ್ಥಳ! ಅಲ್ಲಾಹು ಇಚ್ಛಿಸಿದ ವಿನಾ ನೀವದರಲ್ಲಿ ಶಾಶ್ವತವಾಗಿ ವಾಸಿಸುವಿರಿ.' ಖಂಡಿತವಾಗಿಯೂ ತಮ್ಮ ಪ್ರಭು ಯುಕ್ತಿಪೂರ್ಣನೂ ಸರ್ವಜ್ಞನೂ ಆಗಿರುವನು.[88]

قوله تعالى: (وَيَوْمَ يَحْشُرُهُمْ) نُصِبَ عَلَى الْفِعْلِ الْمَحْذُوفِ، أَيْ وَيَوْمَ نَحْشُرُهُمْ نَقُولُ. (جَمِيعاً) نُصِبَ عَلَى الْحَالِ. وَالْمُرَادُ حُشِرَ جَمِيعُ الْخَلْقِ فِي مَوْقِفِ الْقِيَامَةِ. (يَا مَعْشَرَ الْجِنِّ) نداء مضاف. (قَدِ اسْتَكْثَرْتُمْ مِنَ الْإِنْسِ) أَيْ مِنَ الِاسْتِمْتَاعِ بِالْإِنْسِ، فَحُذِفَ الْمَصْدَرُ الْمُضَافُ إِلَى الْمَفْعُولِ، وَحَرْفُ الْجَرِّ، يَدُلُّ عَلَى ذَلِكَ قَوْلُهُ: (رَبَّنَا اسْتَمْتَعَ بَعْضُنا بِبَعْضٍ) وَهَذَا يَرُدُّ قَوْلَ مَنْ قَالَ: إِنَّ الْجِنَّ هُمُ الَّذِينَ اسْتَمْتَعُوا مِنَ الْإِنْسِ، لِأَنَّ الْإِنْسَ قَبِلُوا مِنْهُمْ. وَالصَّحِيحُ أَنَّ كُلَّ وَاحِدٍ مُسْتَمْتِعٌ بِصَاحِبِهِ. وَالتَّقْدِيرُ فِي الْعَرَبِيَّةِ: اسْتَمْتَعَ بَعْضُنَا بَعْضًا، فَاسْتِمْتَاعُ الْجِنِّ مِنَ الْإِنْسِ أَنَّهُمْ تَلَذَّذُوا بِطَاعَةِ الْإِنْسِ إِيَّاهُمْ، وَتَلَذَّذَ الْإِنْسُ بِقَبُولِهِمْ مِنَ الْجِنِّ حَتَّى زَنَوْا وَشَرِبُوا الْخُمُورَ بِإِغْوَاءِ الْجِنِّ إِيَّاهُمْ. وَقِيلَ: كَانَ الرَّجُلُ إِذَا مَرَّ بِوَادٍ فِي سَفَرِهِ وَخَافَ عَلَى نَفْسِهِ قَالَ: أَعُوذُ بِرَبِّ هَذَا الْوَادِي مِنْ جَمِيعِ مَا أَحْذَرُ. وَفِي

[87] ಸೈತಾನರು ದುರ್ಬೋಧನೆ ಮಾಡುವುದು ತಾತ್ಕಾಲಿಕವಾದ ಸುಖಾನುಭೂತಿಯನ್ನು ತರುವಂತಹ ಮತ್ತು ಮುಂದೆ ಗುರುತರವಾದ ಶಿಕ್ಷೆಗೆ ಕಾರಣವಾಗುವಂತಹ ವಿಷಯಗಳನ್ನಾಗಿವೆ.

[88] ಸೂರಃ ಅನ್‌ಆಂ–128

التَّنْزِيلِ:" وَأَنَّهُ كانَ رِجالٌ مِنَ الْإِنْسِ يَعُوذُونَ بِرِجالٍ مِنَ الْجِنِّ فَزادُوهُمْ رَهَقاً ". فَهَذَا اسْتِمْتَاعُ الْإِنْسِ بِالْجِنِّ. وَأَمَّا اسْتِمْتَاعُ الْجِنِّ بِالْإِنْسِ فَمَا كَانُوا يُلْقُونَ إِلَيْهِمْ مِنَ الْأَرَاجِيفِ وَالْكِهَانَةِ وَالسِّحْرِ. وَقِيلَ: اسْتِمْتَاعُ الْجِنِّ بِالْإِنْسِ أَنَّهُمْ يَعْتَرِفُونَ أَنَّ الْجِنَّ يَقْدِرُونَ أَنْ يَدْفَعُوا عَنْهُمْ مَا يَحْذَرُونَ. وَمَعْنَى الْآيَةِ تَقْرِيعُ الضَّالِّينَ وَالْمُضِلِّينَ وَتَوْبِيخُهُمْ فِي الْآخِرَةِ عَلَى أَعْيُنِ الْعَالَمِينَ. (وَبَلَغْنا أَجَلَنَا الَّذِي أَجَّلْتَ لَنا) يَعْنِي الْمَوْتَ وَالْقَبْرَ، وَوَافَيْنَا نَادِمِينَ. (قالَ النَّارُ مَثْواكُمْ) أَيْ مَوْضِعُ مُقَامِكُمْ. وَالْمَثْوَى الْمُقَامُ. (خالِدِينَ فِيها إِلَّا مَا شاءَ اللَّهُ) اسْتِثْنَاءٌ لَيْسَ مِنَ الْأَوَّلِ. قَالَ الزَّجَّاجُ: يَرْجِعُ إِلَى يَوْمِ الْقِيَامَةِ، أَيْ خَالِدِينَ فِي النَّارِ إِلَّا مَا شَاءَ اللَّهُ مِنْ مِقْدَارِ حَشْرِهِمْ مِنْ قُبُورِهِمْ ومقدار مدتهم في الحساب، فالاستثناء قطع. وَقِيلَ: يَرْجِعُ الِاسْتِثْنَاءُ إِلَى النَّارِ، أَيْ إِلَّا مَا شَاءَ اللَّهُ مِنْ تَعْذِيبِكُمْ بِغَيْرِ النَّارِ فِي بَعْضِ الْأَوْقَاتِ. وَقَالَ ابْنُ عَبَّاسٍ: الِاسْتِثْنَاءُ لِأَهْلِ الْإِيمَانِ. فَ" مَا" عَلَى هَذَا بِمَعْنَى مَنْ. وَعَنْهُ أَيْضًا أَنَّهُ قَالَ: هَذِهِ الْآيَةُ تُوجِبُ الْوَقْفَ فِي جَمِيعِ الْكُفَّارِ. وَمَعْنَى ذَلِكَ أَنَّهَا تُوجِبُ الْوَقْفَ فِيمَنْ لَمْ يَمُتْ، إِذْ قَدْ يُسْلِمُ. وَقِيلَ:" إِلَّا مَا شاءَ اللَّهُ" مِنْ كَوْنِهِمْ فِي الدُّنْيَا بِغَيْرِ عَذَابٍ. وَمَعْنَى هَذِهِ الْآيَةِ مَعْنَى الْآيَةِ الَّتِي فِي" هُودٍ". قول:" فَأَمَّا الَّذِينَ شَقُوا فَفِي النَّارِ" وَهُنَاكَ يَأْتِي مُسْتَوْفًى إِنْ شَاءَ اللَّهُ. إِنَّ رَبَّكَ حَكِيمٌ أي في عقوبتهم وفي جميع أفعال عليم بمقدار مجازاتهم.[89]

[89] ತಫ್ಸೀರು ಖುರ್ತುಬೀ—7/84

﴿وَيَوْمَ يَحْشُرُهُمْ﴾

ಈ ಪ್ರವತಿ ಮಹರ್ಝೂಫ್ ಆಗಿರುವುದರಿಂದ ಮನ್ಸೂಬ್ ಆಗಿರುತ್ತದೆ. ಅಂದರೆ ಯೌಮಯಹಶುರುಹುಂ ಜಮೀಅನ್' ಇದು ವರ್ತಮಾನ ವಾಗಿರುವುದರಿಂದ ಮನ್ಸೂಬ್ ಆಗಿರುತ್ತದೆ. ಉದ್ಧೇಶ ಅಂತ್ಯದಿನದಂದು ಎಲ್ಲಾ ಸೃಷ್ಟಿಗಳನ್ನು ಒಟ್ಟುಗೂಡಿಸುವ ಮ್ಯದಾನದಲ್ಲಿ ಒಟ್ಟುಗೂಡಿಸಲಾಗುವುದು.

﴿يَا مَعْشَرَ الْجِنِّ﴾

ಇದರಲ್ಲಿ ಮುನಾದಿ(ಕರೆ) ಮುಳಾಫ್(ಸೇರಿಸುವುದಾಗಿದೆ) ಆಗಿರುತ್ತದೆ.

﴿قَدِ اسْتَكْثَرْتُمْ مِنَ الْإِنْسِ﴾

ಓ ಜಿನ್ನ್ ಗಳ ಸಮೂಹವೇ! ನೀವು ಮನುಷ್ಯರೊಂದಿಗೆ ಲಾಭಗಳಿಸುತ್ತಾ (ಅವರನ್ನು ಪಥಭ್ರಷ್ಟತೆಗೆ ತಳ್ಳಿರುವಿರಿ) ಇದರಲ್ಲಿ ಮಸ್ದರ್ ಮಫ್ಊಲಿನ ಕಡೆ ಮುಳಾಫ್ ಆಗಿರುತ್ತದೆ ಅದನ್ನು ಹದಫ್(ಕಳೆಯಳಾಗಿದೆ) ಮಾಡಲಾಗಿರುತ್ತದೆ ಮತ್ತು ಜರ್ರ್ ಬ ಅನ್ನು ಹದಫ್(ಕಳೆಯಳಾಗಿದೆ)ಮಾಡಲಾಗಿದೆ ಅಂದರೆ: (ಮಿನಲ್**ಇಸ್ತಿಮ್ತಾಯಿ ಬಿಲ್ ಇನ್ಸ್**) ಇದರಲ್ಲಿ ಅಲ್ಲಾಹನ ಈ ಸೂಕ್ತ ಪುರಾವೆ ಯಾಗುತ್ತದೆ:

﴿رَبَّنَا اسْتَمْتَعَ بَعْضُنَا بِبَعْضٍ﴾

ಇನ್ನು ಅ ಮಾತನ್ನು: ಕಂಡಿತವಾಗಿಯೂ ಜಿನ್ನ್ ಮನುಷ್ಯನೊಂದಿಗೆ ಲಾಭಗಳಿಸಿರುವವು ಎನ್ನುವುದನ್ನು ರದ್ದುಗೊಳಿಸುತ್ತದೆ. ಯಾಕೆಂದರೆ ಮನುಷ್ಯನು ಅವರನ್ನು ಸ್ವೀಕರಿಸಿದರು. ವಾಸ್ತವವಾಗಿರುವುದು ಪ್ರತೀಯೊಬ್ಬ ಪ್ರತೀಯೊಬ್ಬನಿಂದ ಲಾಭಗಳಿಸಿರುವವು ಆದುದರಿಂದ ಅರಬಿಯಲ್ಲಿ ನಿಶ್ಚಿತ ಅರ್ಥ **'ಇಸ್ತಮ್ತಅ ಬಅಳುನಾ ಬಅಳನ್'** ನಾವು ಒಬ್ಬರಿಂದೊಬ್ಬರು

ಲಾಭಗಳನ್ನು ಪಡೆದಿರುವೆವು. ಜಿನ್ನ್ ವರ್ಗವು ಮನುಷ್ಯರಿಂದ ಸೇವೆ ಮತ್ತು ಅನುಕರಣೆ ಮಾಡುವುದರೊಂದಿಗೆ ಸುಖಾನುಭೂತಿಯನ್ನು ಪಡೆದವು ಅದೇರೀತಿ ಮನುಷ್ಯ ಜಿನ್ನ್‌ಗಳನ್ನು ಸ್ವೀಕರಿಸಿ ಅವುಗಳು ಪಥಭ್ರಷ್ಟಗೊಳಿಸಿರುವುದರಿಂದ ಮದ್ಯಗಳನ್ನು ಸೇವಿಸುತ್ತಾ ಸಂತುಷ್ಟಗೊಳ್ಳುತಿದ್ದರು.

ಇನ್ನು ಹೀಗೂ ಹೇಳಲ್ಪಟ್ಟಿವೆ: ಮನುಷ್ಯ ಯಾತ್ರೆಯ ಮದ್ಯೆ ಯಾವುದಾದರೂ ಕಣಿವೆಯಿಂದ ಮುಂದುವರಿಯಬೇಕಾಗಿ ಬಂದಾಗ ಮತ್ತು ಹೆದರಿಕೆ ಅನುಭವವಾದರೆ ಅವನು ಹೇಳುವನು: 'ಅವೂಝು ಬಿರಬ್ಬಿ ಹಾಝಲ್ ವಾದಿ ಮಿನ್ ಜಮೀಅ ಮಾ ಅಹ್‌ಝರ್'–"ಹೆದರುವಂತಹ ಎಲ್ಲಾದರಿಂದ ಈ ಕಣಿವೆಯಲ್ಲಿಯ ಸರದಾರರೊಂದಿಗೆ ನಾನು ಅಭಯ ಯಾಚಿಸುವೆನು". ಮತ್ತು ಖುರ್ಆನಿನಲ್ಲಿದೆ:

﴿وَأَنَّهُ كَانَ رِجَالٌ مِنَ الْإِنْسِ يَعُوذُونَ بِرِجَالٍ مِنَ الْجِنِّ فَزَادُوهُمْ رَهَقاً﴾

ಕಡ್ಡಾಯವಾಗಿಯೂ ಮನುಷ್ಯರಲ್ಲಿ ಕೆಲವರು ಜಿನ್ನ್‌ಗಳಲ್ಲಿ ಸೇರಿದ ಕೆಲವರೊಂದಿಗೆ ಅಭಯವನ್ನು ಯಾಚಿಸುತಿದ್ದರು. ಇದು ಅವರಿಗೆ (ಜಿನ್ನ್‌ಗಳಿಗೆ) ಗರ್ವವನ್ನು ಅಧಿಕಗೊಳಿಸಿತು.

ಇದುವೇ ಮನುಷ್ಯನ ಜಿನ್ನಿನೊಂದಿಗಿರುವ ಇಸ್ತಿಂತಾಅ ಮತ್ತು ಲಾಭವಾಗಿದೆ. ಮತ್ತು ಜಿನ್ನ್ ಗಳಿಗೆ ಮನುಷ್ಯನೊಂದಿಗಿರುವ ಲಾಭ ಅಂದರೆ ಜಿನ್ನ್ ಗಳು ಮನುಷ್ಯನಿಗೆ ಸುಳ್ಳು ಸುದ್ದಿಗಳನ್ನು ಭವಿಷ್ಯ ಹಾಗೂ ಜಾದೂಗರರಿಗೆ ಮುಟ್ಟಿಸುತ್ತಿರುವಂತಹದ್ದಾಗಿದೆ.[90] ಮತ್ತು ಹೀಗೂ ಹೇಳಲ್ಪಟ್ಟಿತ್ತು ಜಿನ್ನಿನ ಮನುಷ್ಯರೊಂದಿಗಿರುವ ಇಸ್ತಿಂತಾಅ ಅಂದರೆ ನಾವು ಹೆದರುವ ಎಲ್ಲಾ ರೀತಿಯ ವಸ್ತುಗಳಿಂದ ಅಭಯನೀಡಲು ಸಾದ್ಯ ಎನ್ನುವ ದೃಢಸಂಕಲ್ಪ ಅವರಲ್ಲಿದ್ದಿತ್ತು. ಇ ಅಯಾತಿನಲ್ಲಿಯ ಉದ್ದೇಶ ಪಥಭ್ರಷ್ಟತೆಯಲ್ಲಿರುವವರು

[90] ತಫ್ಸೀರು ಕಷ್ಷಾಫ್–ಭಾಗ2/ಪುಟ 128

ಮತ್ತು ದಾರಿತಪ್ಪಿಸುವವರಿಗೆ ನಾಳೆ ಅಲ್ಲಾಹನ ಸನ್ನಿಧಿಯಲ್ಲಿ ಸರ್ವಜನರ ಮುಂದೆ ಗದರಿಸಲ್ಪಡಲು ಹೆದರಿಸುವ ಸಲುವಾಗಿದೆ.

﴿وَبَلَغْنا أَجَلَنَا الَّذِي أَجَّلْتَ لَنا﴾

ಇದರಲ್ಲಿ ನಿಶ್ಚಯಿಸಲ್ಪಟ್ಟ ಸಮಯದ ಉದ್ಧೇಶ ಮರಣ ಮತ್ತು ಗೋರಿ ಯಾಗಿರುತ್ತದೆ ಮತ್ತು ನಾವು ಬಹಳ ಖೇದದೊಂದಿಗೆ ಬಂದಿರುವೆವು

﴿قالَ النَّارُ مَثْواكُمْ﴾

ಅಗ್ನಿಯು ನಿಮ್ಮ ವಾಸಸ್ಥಳವಾಗಿದೆ.**'ಮಸ್ವಾ'** ಅಂದರೆ ವಾಸ, ನಿಲ್ಲುವ ಸ್ಥಳ ಎಂಬಿತ್ಯಾದಿ.

﴿خالِدِينَ فِيها إِلَّا ما شاءَ اللَّهُ﴾

ವಿನಾಯಿತಿ ಮೊದಲ ಮಾತಿನಿಂದಿಲ್ಲ ಝುಜಾಜ್ ರ. ಹೇಳುತ್ತಾರೆ: ಈ ವಿನಾಯಿತಿ ಅಂತ್ಯದಿನಕ್ಕೆ ಮರಳುತ್ತವೆ; ಅಂದರೆ ನೀವು ಕಾಲಕಾಲ ಅಗ್ನಿಯಲ್ಲಿರುವಿರಿ ಎಷ್ಟು ಅಲ್ಲಾಹನು ಉದ್ದೇಶಿಸುವನೊ ಅದರ ಹೊರತು. ಅವು ಅವರನ್ನು ಕಬರಿನಿಂದ ಹೊರಟು ಒಟ್ಟುಸೇರುವಷ್ಟು ಮತ್ತು ಅವರ ಲೆಕ್ಕಗಳನ್ನು ನೋಡುವ ಸಮಯದ ವರೆಗೆ ಆಗಿರುತ್ತದೆ. ಈ ರೀತಿಯಲ್ಲಿರುವ ವಿನಾಯಿತಿ ವಿಚ್ಛಿನ್ನವಾಗಿರುವವಾಗಿವೆ. ಅಲ್ಲದೇ ಈ ರೀತಿಯ ವಿನಾಯಿತಿ ಅಗ್ನಿಯಕಡೆಗೆ ಮರಳುವವಾಗಿದೆ ಎಂದೂ ಹೇಳಲಾಗಿವೆ. ಅಂದರೆ ಅಲ್ಲಾಹನು ಉದ್ಧೇಶಿಸಿದಲ್ಲಿ ಕೆಲವು ಸಮಯಗಳಿಗಾಗಿ ಅಗ್ನಿಯಿಂದ ವಿನಾಯಿತಿ ಕೊಡಲಾಗುವುದು. ಇಬ್ನ್ ಅಬ್ಬಾಸ್ (ರ) ಹೇಳುತ್ತಾರೆ: ವಿನಾಯಿತಿ ಈಮಾನಿನ ಜನರಿಗಾಗಿದೆ. ಅಂದರೆ **'ಮಾ'** ಎನ್ನುವುದು **'ಮನ್'** ಎಂಬ ಅರ್ಥವನ್ನು ನೀಡುವುದಾಗಿದೆ. ಹಾಗು ಅವರಿಂದಲೇ ವರದಿಯಾಗಿರುವುದು: ಈ ಆಯಾತ್ ಸಾಬೀತು ಪಡಿಸುವುದೇನೆಂದರೆ ಇನ್ನೂ ಮರಣಹೊಂದದೇ ಇರುವವರ ಬಗ್ಗೆ

ಆಗಿರುತ್ತದೆ ಎಂದು ಅಂದರೆ ಪುನಃ ಇಸ್ಲಾಮ್ ಸ್ವೀಕರಿಸುವುದಾಗಿದೆ. (ಪಾಪಗಳನ್ನು ಮಾಡಿದ ಮೇಲೆ ಅಲ್ಲಾಹನಲ್ಲಿ ಪಶ್ಚಾತಾಪ ಪಟ್ಟು ಪುನಃ ದೀನಿನಲ್ಲಿ ಸ್ಥಿರವಾಗಿ ನಿಂತವರ ಬಗ್ಗೆ) ಮತ್ತು ಹೀಗೂ ಹೇಳಲಾಗಿದೆ: ಅಲ್ಲಾಹನಲ್ಲಿಯ ವಿನಾಯಿತಿ ಎಂದರೆ ಭೂಲೋಕದಲ್ಲಿ ಶಿಕ್ಷೆಯಿಲ್ಲದೇ ಇರುವುದಾಗಿದೆ ಎಂದು. ಈ ಆಯಾತ್ತಿನ ಅರ್ಥ ಸೂರತುಲ್ ಹೂದಿನ ನೂರ ಆರನೇ ಆಯಾತ್ತಿನಂತೆ ಆಗಿರುತ್ತದೆ.

﴿فَأَمَّا الَّذِينَ شَقُوا فَفِي النَّارِ﴾[91]

ಅಲ್ಲಿ ಇದರ ಪರಿಪೂರ್ಣ ವಿವರಣೆ ಬರುವುದು ಇನ್ ಶಾಅ ಅಲ್ಲಾಹ್. **'ಇನ್ನ ರಬ್ಬಕ ಹಕೀಮ್'** ಅಂದರೆ ಅವರ ಎಲ್ಲಾ ಪಾಪಗಳಿಗೆ ಮತ್ತು ಎಲ್ಲಾ ಕಸುಬುಗಳಿಗೆ ಶಿಕ್ಷೆನೀಡುವಲ್ಲಿ (ತಮ್ಮ ಪ್ರಭು ಯುಕ್ತಿಪೂರ್ಣನೂ ಸರ್ವಜ್ಞನೂ ಆಗಿರುವನು)

ಅಲ್ಲಾಮ ಅಬೂ ಹಯ್ಯಾನ್ ಹೇಳುತ್ತಾರೆ:[92]

وَرُوِيَ عَنِ ابْنِ عَبَّاسٍ أَنَّهُ قَالَ: هَذِهِ الْآيَةُ تُوجِبُ الْوَقْفَ فِي جَمِيعِ الْكُفَّارِ. قِيلَ: وَمَعْنَى ذَلِكَ أَنَّهَا تُوجِبُ الْوَقْفَ فِيمَنْ لَمْ يَمُتْ إِذْ قَدْ يُسْلِمْ[93]

ಇಬ್ನ್ ಅಬ್ಬಾಸ್(ರ)ರ ವರದಿ ಪ್ರಕಾರ ಸರ್ವ ಸತ್ಯನಿಷೇದಿಗಳಿಗಾಗಿರುವುದು ಈ ಆಯಾತ್, ಹೇಳಲಾಗಿದೆ: ಇಲ್ಲಾ ಮಷಾಅಲ್ಲಾಹ್ ನ ಅರ್ಥ ಮರಣ ಹೊಂದದೇ ನಂತರ ಇಸ್ಲಾಮನ್ನು ಸ್ವೀಕರಿಸಲ್ಪಟ್ಟವರ ಬಗ್ಗೆ ಯಾಗಿದೆ.

---

[91] ಸೂರತುಲ್ ಹೂದ್–106

[92] ಅಲ್ಲಾಮ ಮುಹಮ್ಮದ್ ಬಿನ್ ಯೂಸುಫ್ ಬಿನ್ ಅಲೀ ಬಿನ್ ಯೂಸುಫ್ ಬಿನ್ ಹಯ್ಯಾನ್ ಅಸೀರುದ್ದೀನ್ ಅಬೂ ಹಯ್ಯಾನ್, ಅಲ್ ಗರ್ನಾತೀ, ಅಂದುಲುಸೀ ಅಲ್ ಜಿಯಾನೀ ಅನಫ್ಝೀ– ಅಖೀದ ಅಹುಲು ಸುನ್ನಃ ಅಶಅರೀ, ಮಝಹಬ್ ಳ್ವಾಹಿರೀ ಮರಣ: ಹಿಜರಿ–745 ಕೈರೋ.

[93] ತಫ್ಸೀರು ಬಹರುಲ್ ಮುಹೀತ್–4/646

ಇಲ್ಲಿ ನಮ್ಮೆಡೆಯಲ್ಲಿರುವ ಕೆಲವರ ಅಭಿಪ್ರಾಯದಂತೆ ಸ್ವಹಾಬತ್ತರು ಜಿನ್ನಿನೊಂದಿಗೆ ಸುಖಾನುಭೂತಿ ಪಡೆದಿರುವವರೆಂದಾಗಿದೆ. ಅದು ಶುದ್ಧ ಮೂರ್ಖತನವೆಂದು ಜಾಮಿಯುಲ್ ಅಹ್ಕಾಮುಲ್ ಖುರ್ಆನಿನಿಂದ ಸಾಬೀತಾಯಿತು. ಕಾರಣ ಸಾಧಾರಣ ಎಲ್ಲಾ ತಫ್ಸೀರುಗಳಲ್ಲಿ ಬಂದಿರುವಂತೆ ಇಸ್ಲಾಮಿಗಿಂತ ಮುಂಚೆ ಅಲ್ಲಾಹನ ಹೊರತು ಜಿನ್ನ್ ಗಳೊಂದಿಗೆ ಅವರನ್ನು ಸೇವೆ ಮತ್ತು ಅನುಕರಣೆ ಮಾಡುತ್ತಾ ಮತ್ತಿನ ಗುಂಗಿನಲ್ಲಿ ಅವುಗಳಿಂದ ಬಹಳಷ್ಟು ಲಾಭ ಒಬ್ಬರಿಂದೊಬ್ಬರು ಪಡೆದಿರುವವರು. ಅಲ್ಲಾಹನು ಅಂತಹವರೆನ್ನೆಲ್ಲಾ ನರಕಕ್ಕೆಂದು ಹೇಳುವಲ್ಲಿ ನಂತರ ತೌಬಾ ಮಾಡಿ ಇಸ್ಲಾಮ್ ಸ್ವೀಕರಿಸಿದ ಜನರಿಗೆ ವಿನಾಯಿತಿ ಕೊಟ್ಟಿರುವ ಮಾತಾಗಿದೆ **ಇಲ್ಲಾ ಮಾಷಾ ಅಲ್ಲಾಹ್** ಎನ್ನುವುದು. ಇದರ ಬಗ್ಗೆ ಬಂದಿರುವ ಹತ್ತಾರು ಅಭಿಪ್ರಾಯಗಳಲ್ಲಿ ಶ್ರೇಷ್ಟ ಅಭಿಪ್ರಾಯವು ಇದಾಗಿದೆ. ಅದುವೆ ಇಬ್ನ್ ಅಬ್ಬಾಸ ರ. ರವರು ಈಮಾನಿನ ಸಮೂಹದವರೆಂದಿರುವುದೂ ಆಗಿರುತ್ತದೆ.

﴿إِنَّ الَّذِينَ اتَّقَوْا إِذَا مَسَّهُمْ طَائِفٌ مِنَ الشَّيْطَانِ تَذَكَّرُوا فَإِذَا هُمْ مُبْصِرُونَ﴾
ಖಂಡಿತವಾಗಿಯೂ ಭಯಭಕ್ತಿ ಪಾಲಿಸುವವರಿಗೆ ಶೈತಾನನ ಕಡೆಯಿಂದ ಏನಾದರೂ ದುಷ್ಪ್ರೇರಣೆಯುಂಟಾದರೆ ಅವರು (ಅಲ್ಲಾಹುವನ್ನು) ಸ್ಮರಿಸುವರು. ಆಗ ಅವರು ಒಳದೃಷ್ಟಿಯುಳ್ಳವರಾಗುವರು.[94]

ಈ ಆಯತ್ ವ್ಯಕ್ತವಾಗಿ ಸ್ಪಷ್ಟವಾಗಿ ತಿಳಿಹೇಳುವುದೇನೆಂದರೆ ಅಲ್ಲಾಹನನ್ನು ಭಯಪಿರಿಸುವ ಸತ್ಯವಿಶ್ವಾಸಿಯೂ ಶೈತಾನನ ವತಿಯಿಂದ ಏನಾದರೂ ದುಷ್ಪ್ರೇರಣೆಯೋ ತಖಯ್ಯಲ್(ತೋರಿಕೆಯೋ) ಉಂಟಾದರೆ ಕೂಡಲೇ ಅಲ್ಲಾಹನನ್ನು ಧ್ಯಾನಿಸುವರು ಹೊರತು **'ಯಾ ಇಬಾದಲ್ಲಾಹ್ ಅಯಿನೂನೀ'** ಎಂದು ಮೊರೆ ಹೋಗುವವರಲ್ಲ ಎನ್ನುವುದಾಗಿದೆ. ಮೂಸಾ(ಅ)ರಿಗೆ ಫಿರೌನಿನ ಮುಂದೆನಿಂತು ಎದುರಿಸಲು ಸನ್ನದ್ದರಾಗ ಅವನ ಕುತಂತ್ರ ತಡೆಯಲಾಗದೇ

[94] ಸೂರತುಲ್ ಅಅರಾಫ್–201

ಬಂದಾಗ ಜಿನ್ನ್‌ಗಳನ್ನು ಕೂಗದೇ ಮೂಸಾ(ಅ) ತಮ್ಮ ಜನರೊಂದಿಗೆ ಹೇಳಿರುವುದು:

﴿ قالَ مُوسى لِقَوْمِهِ اسْتَعِينُوا بِاللَّهِ وَاصْبِرُوا ﴾

'ಮೂಸಾ ತನ್ನ ಜನರೊಂದಿಗೆ ಹೇಳಿದರು: 'ನೀವು ಅಲ್ಲಾಹುವಿನೊಂದಿಗೆ ಸಹಾಯ ಬೇಡಿರಿ ಮತ್ತು ಸಹನೆ ಪಾಲಿಸಿರಿ.'[95]

ಮೂಸಾ(ಅ)ಕಾಲವು ಜಾದೂ, ಕಣ್ಕಟ್ಟು, ಇತ್ಯಾದಿ ತುಂಬಿರುವಂತಹ ಮಹಾ ಮಾಂತ್ರಿಕರ ಕಾಲವಾಗಿತ್ತು ಆ ಕಾಲದಲ್ಲೂ ಸಹ ಜಿನ್ನಿನೊಂದಿಗಿರುವ ಸಹಾಯ ಅಲ್ಲಾಹನೊಂದಿಗಿರುವ ಸಹಭಾಗಿತ್ವವಾಗಿತ್ತು. ಎನ್ನುವುದು ಮಹಾನ್ ಮುಫಸ್ಸಿರುಗಳಲ್ಲಿ ಕಾಣಲುಸಿಗುವಂತಹಾ ಸತ್ಯವಾಗಿದೆ. ಹೀಗಿರುವಾಗ ಸೂರ್ಯ ಚಂದ್ರನಂತೆ ಸುವ್ಯಕ್ತವಾಗಿ ಒಳಿತು ಮತ್ತು ಕೆಡುಕುಗಳು ಬೇರ್ಪಟ್ಟಿರುವ ಈ ಕಾಲದಲ್ಲಿ ಮುಸಲ್ಮಾನನಿಗೆ ಅದು ಬರೇ ಹರಾಂ ಆಗಿರುವ ವಸ್ತುವಾಗಿ ಮಾರ್ಪಟ್ಟಿರುವುದು ಎಷ್ಟು ಖೇದದ ಸಂಗತಿಯಾಗಿದೆ.

﴿يَا مَعْشَرَ الْجِنِّ وَالْإِنْسِ أَلَمْ يَأْتِكُمْ رُسُلٌ مِنْكُمْ يَقُصُّونَ عَلَيْكُمْ آيَاتِي ﴾

'ಓ ಜಿನ್ನ್ ಮತ್ತು ಮನುಷ್ಯರ ಸಮೂಹವೇ! ನಿಮಗೆ ನನ್ನ ದೃಷ್ಟಾಂತಗಳನ್ನು ವಿವರಿಸಿಕೊಡುತ್ತಲೂ, ನಿಮ್ಮ ಈ ದಿನದ ಭೇಟಿಯ ಕುರಿತು ನಿಮಗೆ ಎಚ್ಚರಿಕೆ ನೀಡುತ್ತಲೂ, ನಿಮ್ಮಿಂದಲೇ ಇರುವ ಸಂದೇಶವಾಹಕರು ನಿಮ್ಮ ಬಳಿಗೆ ಬಂದಿರಲಿಲ್ಲವೇ?'

﴿قَالَ ادْخُلُوا فِي أُمَمٍ قَدْ خَلَتْ مِنْ قَبْلِكُمْ مِنَ الْجِنِّ وَالْإِنْسِ فِي النَّارِ ٣٨ الأعراف﴾

[95] ಸೂರಃ ಅಲ್ ಅರಾಫ್ –128

ಅವನು (ಅಲ್ಲಾಹು) ಹೇಳುವನು: 'ಜಿನ್ನ್ ಮತ್ತು ಮನುಷ್ಯರ ಪೈಕಿ ನಿಮಗಿಂತ ಮುಂಚೆ ಗತಿಸಿ ಹೋಗಿರುವ ಸಮುದಾಯಗಳೊಂದಿಗೆ ನೀವೂ ನರಕಾಗ್ನಿಯನ್ನು ಪ್ರವೇಶಿಸಿರಿ'.

﴿قَالُوا سُبْحَانَكَ أَنْتَ وَلِيُّنَا مِنْ دُونِهِمْ بَلْ كَانُوا يَعْبُدُونَ الْجِنَّ أَكْثَرُهُمْ بِهِمْ مُؤْمِنُونَ﴾.

ಅವರು ಹೇಳುವರು: 'ನೀನು ಪರಮ ಪಾವನನು! ನಮ್ಮ ರಕ್ಷಕನು ನೀನೇ ಹೊರತು ಅವರಲ್ಲ. ಅಲ್ಲ, ಅವರು ಆರಾಧಿಸುತ್ತಿದ್ದುದು ಜಿನ್ನ್‌ಗಳನ್ನಾಗಿತ್ತು.[96] ಅವರಲ್ಲಿ ಹೆಚ್ಚಿನವರೂ ಜಿನ್ನ್‌ಗಳ ಮೇಲೆ ವಿಶ್ವಾಸ ವಿಟ್ಟವರಾಗಿದ್ದರು'.

ಸದ್ರುದ್ದೀನ್ ಮುಹಮ್ಮದ್ ದಿಮಷ್ಕೀ ತಹಾವೀ ಯವರು ಹೇಳುತ್ತಾರೆ:

فَاسْتِمْتَاعُ الْإِنْسِيُّ بِالْجِنِّيِّ: فِي قَضَاءِ حَوَائِجِهِ، وَامْتِثَالِ أَوَامِرِهِ، وَإِخْبَارِهِ بِشَيْءٍ مِنَ الْمُغَيَّبَاتِ، وَنَحْوِ ذَلِكَ، وَاسْتِمْتَاعُ الْجِنِّ بِالْإِنْسِ: تَعْظِيمُهُ إِيَّاهُ، وَاسْتِعَانَتُهُ بِهِ، وَاسْتِغَاثَتُهُ وَخُضُوعُهُ لَهُ.. [97]

---

[96] ಮಲಕ್‌ಗಳನ್ನು ದೇವತೆಗಳೆಂದು ಪರಿಕಲ್ಪಿಸಿ ಆರಾಧಿಸುವ ಸಂಪ್ರದಾಯವು ಅನೇಕ ಜನಾಂಗಗಳಲ್ಲಿತ್ತು. ಅವರ ಹೆಸರಲ್ಲಿ ಸ್ಥಾಪಿಸಲಾಗುವ ವಿಗ್ರಹಗಳ ಮುಂದೆ ಇಂತಹ ಆರಾಧನೆಗಳು ನಡೆಯುತ್ತಿದ್ದವು. ಇದು ಮಲಕ್‌ಗಳ ಒಪ್ಪಿಗೆಯಿಂದ ಜರುಗುತ್ತಿರಲಿಲ್ಲ. ಆ ವಿಗ್ರಹಗಳ ಬಳಿ ಮಲಕ್‌ಗಳು ಉಪಸ್ಥಿತರಿರಲಿಲ್ಲ. ಅದರ ಹೊರತು ಶೈತಾನರುಗಳ (ಜಿನ್ನ್‌ಗಳ) ದುಷ್ಪ್ರೇರಣೆ ಮತ್ತು ಉಪಸ್ಥಿತಿಯು ಅಲ್ಲಿತ್ತು. ವಾಸ್ತವಿಕವಾಗಿ ಅಲ್ಲಿ ಆರಾಧಿಸಲಾಗುತ್ತಿದ್ದುದು ಶೈತಾನರನ್ನಾಗಿತ್ತು. ಈ ವಿಷಯವನ್ನು ಮಲಕ್‌ಗಳು ಸೂಚಿಸುತ್ತಿದ್ದಾರೆ. ಜನರು ತನ್ನನ್ನು ಆರಾಧಿಸುವುದನ್ನು ಯಾರಾದರೂ ಇಷ್ಟಪಡುವುದಾದರೆ ಮಾತ್ರ ಅವನು ಮಅ್‌ಬೂದ್ (ಆರಾಧ್ಯ) ಎಂಬ ದೆಸೆಯಲ್ಲಿ ಅಲ್ಲಾಹನ ಶಿಕ್ಷೆಗೆ ಅರ್ಹನಾಗುತ್ತಾನೆ. ಪ್ರವಾದಿ ಈಸಾ(ಅ)ಮುಂತಾದ ಮಹಾತ್ಮರು ಹಾಗೂ ಮಲಕ್‌ಗಳು ಆರಾಧಿಸಲಾಗುತ್ತಿದ್ದುದು ಅವರ ಒಪ್ಪಿಗೆ ಅಥವಾ ಅಂಗೀಕಾರದಿಂದಾಗಿರಲಿಲ್ಲ. ಅವರು ಅದನ್ನು ತಿಳಿಯುವುದು ಕೂಡ ಇಲ್ಲ. ಆದ್ದರಿಂದಲೇ ಅವರು ನಿರಪರಾಧಿಗಳಾಗಿದ್ದಾರೆ. ಮಲಕ್‌ಗಳ ಉತ್ತರದಲ್ಲಿ ಈ ನಿರಪರಾಧಿತ್ವವನ್ನು ಕೂಡ ಸೂಚಿಸಲಾಗಿದೆ.

[97] ಶರಹು ಅಖೀದತು ತಹಾವೀ.–2/766(ಸದ್ರುದ್ದೀನ್ ಮುಹಮ್ಮದ್ ಅಲ್ ಅಝ್ರುಯೀ ಅಸ್ವಾಲಿಹೀ ಅದಿಮಷ್ಕೀ–ಮರಣ ಹಿಜರಿ:792)

ಇಲ್ಲಿ ಅವನ ಆಗುಹೋಗುಗಳನ್ನು ಪೂರ್ತಿಕರಿಸಲು, ಅವನ ಆಜ್ಞೆಗಳನ್ನು ಪಾಲಿಸಲು, ಅಗೋಚರವಾದ ವಾರ್ತೆಗಳನ್ನು ತಿಳಿಯಲು ಹಾಗೂ ಇತ್ಯಾದಿ ಗಳಿಂದ ಮನುಷ್ಯನು ಜಿನ್ನಿನೊಂದಿಗೆ ಲಾಭವನ್ನು ಪಡೆಯುವುದಾಗಿದೆ. ಮತ್ತು ಜಿನ್ನ್ ಗಳನ್ನು ಬಹುಮಾನಿಸುತ್ತಾ, ಅವುಗಳಿಂದ (ಇಸ್ತಿಆನಃ)ಸಹಾಯಗಳನ್ನು ಪಡೆಯುವುದರಿಂದ, ಪರಿಹಾರಗಳನ್ನು ಬೇಡುತ್ತಾ, ಅವನಲ್ಲಿ ವಿನಮ್ರತೆಯನ್ನು ತೋರುವುದು ಮನುಷ್ಯನಿಂದ ಜಿನ್ನಿಗಿರುವ ಲಾಭವಾಗಿದೆ.
ಇವುಗಳೆಲ್ಲವೂ ಶಿರ್ಕ್‌ಗಳಿಂದ ಕೂಡಿದವುಗಳಾಗಿವೆ.

## ಹದೀಸ್ ನಲ್ಲಿ ಜಿನ್ನಿನೊಂದಿಗಿರುವ ಸಹಾಯದ ಬಗ್ಗೆ

ಹದೀಸುಗಳಲ್ಲಿ ಜಿನ್ನಿನೊಂದಿಗಿರುವ ಸಹಾಯದ ಬಗ್ಗೆ ಬಂದಿರುವ ವಿವರಗಳಲ್ಲಿ ಪ್ರಾಮುಖ್ಯವಾದ ಕೆಲವನ್ನು ಮಾತ್ರ ಇಲ್ಲಿ ನಾವು ವಿವರಿಸುವೆವು.

عَنْ عَبْدِ اللَّهِ، ﴿إِلَى رَبِّهِمِ الْوَسِيلَةَ﴾ قَالَ كَانَ نَاسٌ مِنَ الإِنْسِ يَعْبُدُونَ نَاسًا مِنَ الْجِنِّ، فَأَسْلَمَ الْجِنُّ، وَتَمَسَّكَ هَؤُلاَءِ بِدِينِهِمْ.[98]

ಇಮಾಮ್ ಬುಖಾರಿ(ರ) ರವರ ವರದಿಯಂತೆ ಇಲಾ ರಬ್ಬಿಹಿಮುಲ್ ವಸೀಲತ ಎನ್ನುವ ಆಯಾತ್ತಿನ ಅಡಿಯಲ್ಲಿ ಅಬ್ದುಲ್ಲಾ ಬಿನ್ ಮಸೂದ್(ರ) ಉಲ್ಲೇಖಿಸುತ್ತಾರೆ: ಅವರು ಹೇಳುತ್ತಾರೆ ಮನುಷ್ಯ ಜನಾಂಗದವರಲ್ಲಿ ಕೆಲವರು ಜಿನ್ನ್ ಜನಾಂಗದವರನ್ನು ಆರಾಧಿಸುತಿದ್ದರು ಆ ಸಂದರ್ಭದಲ್ಲಿ ಜಿನ್ನ್‌ಗಳು ಇಸ್ಲಾಮ್ ಸ್ವೀಕರಿಸಿದರು ಮತ್ತು ಜಿನ್ನ್ ಜನಾಂಗದವರು ದೀನನ್ನು ಬಿಡದಪ್ಪಿಕೊಂಡರು.

ಈ ಹದೀಸನ್ನು ನೋಡಿದ ಕೆಲವರು ಸ್ವಹಾಬ ಕಿರಾಂ ಜಿನ್ನುಗಳನ್ನು ಆರಾಧಿಸುತಿದ್ದರು ಎಂದು ಹೇಳುವುದನ್ನು ಕಾಣಬಹುದು ಆದರೆ ಅದು ಸತ್ಯಕ್ಕೆ

[98] ಸ್ವಹೀಹುಲ್ ಬುಖಾರಿ–4714

ದೂರವಾದ ಸಂಗತಿಯಾಗಿರುತ್ತದೆ. ಕಾರಣ ಅಲ್ಲಿ ಜನರಲ್ಲಿ ಕೆಲವರು ಅಂದಿದೆ ಅಂದರೆ ಅಲ್ಲಿ ಸ್ವಹಾಬ ಕಿರಾಂ ಎಂದು ಸೂಚಿಸಿಲ್ಲ. ಕಾನನ್ನಾಸು ಮಿನಲ್ ಇನ್ಸಿ ಎಂದೇ ಬಂದಿರುವುದು ಅಲ್ಲದೇ ಅದನ್ನು ಯಾವೊಬ್ಬ ಮುಹದ್ದಿಸ್ ಇದುವರೆಗೆ ಅವರು ಸ್ವಹಾಬಕಿರಾಮ್ ಎಂದು ಹೇಳಿದ್ದಾಗಿ ಎಲ್ಲಿಯೂ ನೋಡಲು ಸಾದ್ಯವಾಗಿಲ್ಲ. ಅದುದರಿಂದ ಅವರನ್ನು ಸ್ವಹಾಬ ಕಿರಾಂ ಹೇಳುವುದು ಸತ್ಯಕ್ಕೆ ದೂರವಾದದ್ದಾಗಿದೆ.

## [بَابُ مَا يَقُولُ إِذَا انْفَلَتَتْ دَابَّتُهُ أَوْ أَرَادَ غَوْثًا أَوْ أَضَلَّ شَيْئًا]
## ಅದ್ಯಾಯ: ವಾಹನಮೃಗ ಕಾಣೆಯಾದರೆ ಅಥವಾ ಪರಿಹಾರವನ್ನು ಉದ್ಧೇಶಿಸಿದರೆ ಅಥವಾ ದಾರಿಕಾಣದಾದರೆ ಹೇಳುವಂತಹದು.

عَنْ عُتْبَةَ بْنِ غَزْوَانَ، عَنْ نَبِيِّ اللَّهِ - صَلَّى اللَّهُ عَلَيْهِ وَسَلَّمَ - قَالَ: " «إِذَا أَضَلَّ أَحَدُكُمْ شَيْئًا، أَوْ أَرَادَ عَوْنًا، وَهُوَ بِأَرْضٍ لَيْسَ بِهَا أَنِيسٌ فَلْيَقُلْ: يَا عِبَادَ اللَّهِ، أَغِيثُونِي ; فَإِنَّ لِلَّهِ عِبَادًا لَا نَرَاهُمْ ". وَقَدْ جَرَّبَ ذَلِكَ».

رَوَاهُ الطَّبَرَانِيُّ، وَرِجَالُهُ وُثِّقُوا عَلَى ضَعْفٍ فِي بَعْضِهِمْ، إِلَّا أَنَّ زَيْدَ بْنَ عَلِيٍّ لَمْ يُدْرِكْ عُتْبَةَ.

ಉತ್ಬತ್ ಇಬ್ನ್ ಘಝ್ವಾನ್ ರಿಂದ ಅವರು ಪ್ರವಾದಿ ಸ. ರವರಿಂದ ಉಲ್ಲೇಖಿಸುತ್ತಾರೆ: ಪ್ರವಾದಿ ಸ.ರವರು ಹೇಳಿದರು; “ನಿಮ್ಮಲ್ಲೊಬ್ಬರ ವಸ್ತು ಕಾಣೆಯಾದರೆ, ಅಥವಾ ಪರಿಹಾರ ದೋರೆಯಬೇಕಾದಲ್ಲಿ, ಅವನು ಮನುಷ್ಯರಿಲ್ಲದ ಸ್ಥಳದಲ್ಲಿದ್ದರೆ ಅವಾಗ ಅವನು ಹೇಳಲಿ: ಯಾ ಅಲ್ಲಾಹನ ದಾಸರೇ ನನ್ನ ಸಂಕಷ್ಟವನ್ನು ಪರಿಹರಿಸಿ; ಅಲ್ಲಾಹನಿಗೆ ನಾವು ಕಾಣದ ದಾಸರಿರುವರು” ಅದನ್ನು ಪರೀಕ್ಷಿಸಲ್ಪಟ್ಟದ್ದಾಗಿದೆ. ತ್ವಬ್ರಾನಿ ಇದನ್ನು ವರದಿ ಮಾಡಿರುವರು, ಕೆಲವು ಕ್ಷೀಣ ವ್ಯಕ್ತಿಗಳ ಹೊರತು ಶೃಂಖಲೆಯಲ್ಲಿರುವವರು ಪ್ರಮಾಣಿಗಳು

وَعَنِ ابْنِ عَبَّاسٍ: أَنَّ رَسُولَ اللَّهِ - صَلَّى اللَّهُ عَلَيْهِ وَسَلَّمَ - قَالَ: " «إِنَّ لِلَّهِ مَلَائِكَةً فِي الْأَرْضِ سِوَى الْحَفَظَةِ، يَكْتُبُونَ مَا يَسْقُطُ مِنْ وَرَقِ الشَّجَرِ، فَإِذَا أَصَابَ أَحَدَكُمْ عَرْجَةٌ بِأَرْضٍ فَلَاةٍ فَلْيُنَادِ: أَعِينُوا عِبَادَ اللَّهِ» ". رَوَاهُ الْبَزَّارُ، وَرِجَالُهُ ثِقَاتٌ.

ಇಬ್ನ್ ಅಬ್ಬಾಸ್(ರ) ರಿಂದ ಉಲ್ಲೇಖ ಪ್ರವಾದಿ ಸ.ಹೇಳಿದರು: ಅಲ್ಲಾಹನಿಗೆ ಭುವನದಲ್ಲಿ ಹಫಲಗಳಲ್ಲದ ಮಲಾಯಿಕತ್ತರಿರುವರು. ಮರದಿಂದ ಬೀಳುವ ಎಲೆಯನ್ನು ಕೂಡ ಬರೆಯುವರು, ಮರುಭೂಮಿಯಲ್ಲಿ ಯಾರಿಗಾದರೂ ವಿಘ್ನ ಉಂಟಾದಲ್ಲಿ ಅವನು ಕರೆಯಲಿ ಅಲ್ಲಾಹನ ದಾಸರೆ ಸಹಾಯಿ ಗಳಾಗಿರೆಂದು" ಬಝ್ಝಾರ್ ಇದನ್ನು ವರದಿ ಮಾಡಿರುವರು, ಶೃಂಖಲೆಯಲ್ಲಿರುವವರು ಪ್ರಮಾಣಿಗಳೆಂದಿರುವರು.

ثَنَا الْحَسَنُ بْنُ عُمَرَ بْنِ شَقِيقٍ، ثَنَا مَعْرُوفُ بْنُ حَسَّانٍ، عَنْ سَعِيدٍ، عَنْ قَتَادَةَ، عَنِ ابْنِ بُرَيْدَةَ، وَعَنْ عَبْدِ اللَّهِ بْنِ مَسْعُودٍ أَنَّهُ قَالَ: قَالَ رَسُولُ اللَّهِ - صَلَّى اللَّهُ عَلَيْهِ وَسَلَّمَ: " «إِذَا انْفَلَتَتْ دَابَّةُ أَحَدِكُمْ بِأَرْضٍ فَلَاةٍ فَلْيُنَادِ: يَا عِبَادَ اللَّهِ احْبِسُوا، يَا عِبَادَ اللَّهِ احْبِسُوا ; فَإِنَّ لِلَّهِ حَاضِرًا فِي الْأَرْضِ سَيَحْبِسُهُ» ". رَوَاهُ أَبُو يَعْلَى، وَالطَّبَرَانِيُّ، وَزَادَ: " «سَيَحْبِسُهُ عَلَيْكُمْ» ". وَفِيهِ مَعْرُوفُ بْنُ حَسَّانَ، وَهُوَ ضَعِيفٌ.17105

ಅಬ್ದುಲ್ಲಾಹ್ ಇಬ್ನ್ ಮಸ್ಊದ್(ರ)ರಿಂದ ಅವರು ಹೇಳಿದರು ಪ್ರವಾದಿ ಸ.ರವರು ಹೇಳಿದರು " ಮರುಭೂಮಿಯಲ್ಲಿ ಯಾರದ್ದಾದರೂ ವಾಹನ ಮೃಗ ಕಾಣೆಯಾದಲ್ಲಿ ಅವನು ಕರೆಯಲಿ: ಯಾ ಅಲ್ಲಾಹನ ದಾಸರೆ! ಅವನು ಕೂಡಿಹಾಕಿರಿ, ಯಾ ಅಲ್ಲಾಹನ ದಾಸರೆ! ಅವನು ಕೂಡಿಹಾಕಿರಿ, ಅಲ್ಲಾಹನಿಗೆ ಪ್ರತ್ಯೇಕ್ಷವಾಗಿರುವ(ದಾಸರಿರುವರು) ಅವರದನ್ನು ಕೂಡಿ ಹಾಕುವರು. ಅಬೂ ಯಅಲ ಮತ್ತು ತ್ವಬ್ರಾನಿ (ನಿಮಗಾಗಿ ಅವರು ಕೂಡಿಹಾಕುವರು) ಎಂದು

ಸೇರಿಸಿರುವರು. ಇದರ ಶೃಂಖಲೆಯಲ್ಲಿ ಮಅರೂಫ್ ಬಿನ್ ಹಸ್ಸಾನ್ ಳ್ವಯೀಫ್ ಆಗಿರುವರು.[99]

ಹದೀಸ್ ಸಂಖ್ಯೆ 17105, ಳ್ವಯೀಫ್ ಆಗಿರುತ್ತದೆ. ಇದನ್ನು ತ್ವಬ್ರಾನಿ–1/3/81, ಅಬೂ ಯಅಲ ತನ್ನ ಮುಸ್ನದ್ ನಲ್ಲಿ–1/254, ಅವರಿಂದ ಇಬ್ನ್ ಸುನ್ನೀ ತನ್ನ 'ಅಮಲ್ ಅಲ್ ಯೌಮ್ ವಲ್ಲೈಲ್' 500 ನೇ ಹದೀಸಾಗಿ, ಇವರಿಬ್ಬರೂ ಮಅರೂಫ್ ಬಿನ್ ಹಸ್ಸಾನ್ ರವರ ಮಾರ್ಗವಾಗಿ ಈ ಹದೀಸನ್ನು ತಂದಿರುವರು. ಇದರಲ್ಲಿ ಎರಡು ನ್ಯೂನ್ಯತೆಗಳಿವೆ.

**ಒಂದು:** ಮಅರೂಫ್ ಬಿನ್ ಹಸ್ಸಾನ್ ಅರಿಯಲ್ಪಡದ ವ್ಯೆಕ್ತಿಯಾಗಿರುವರು ಎಂದು ಇಬ್ನ್ ಅಬೀ ಹಾತಿಮ್ ತಮ್ಮ ತಂದೆಯಿಂದ ಮಜ್‌ಹೂಲ್ (ತಿಳಿಯದ) ವ್ಯೆಕ್ತಿ ಎಂದು ವರದಿ ಮಾಡಿರುವರು.–4/1/333. ಇಬ್ನ್ ಅದೀ ಮತ್ತು ಹ್ಯತಮೀ ಮಅರೂಫರನ್ನು ಮುಂಕರುಲ್ ಹದೀಸ್ ಮತ್ತು ಮುಅಲ್ಲಿಲ್ ಅಂದಿದ್ದರು.

**ಎರಡನೇಯದು:** 'ಇಂಕಿತಾಅ' ಸಂಭಂದ ಮುರಿದಿರುವುದು. ಇಬ್ನ್ ಅಲ್ಲಾನ್ ರನ್ನು ನಕಲು ಮಾಡುತ್ತಾ ಹಾಫಿಳ್ ಇಬ್ನ್ ಹಜರ್ ರಹಿಮಹುಲ್ಲಾಹ್ ತನ್ನ 'ಅಲ್ ಅಝ್ಕಾರ್' ನಲ್ಲಿ ಇಬ್ನ್ ಸುನ್ನೀ ಮತ್ತು ತ್ವಬ್ರಾನಿ ಹೊರಡಿಸಿರುವ ಹದೀಸ್ ಘರೀಬ್ ಆಗಿರುತ್ತದೆ. ಅಲ್ಲದೇ ಇಬ್ನ್ ಬುರೈದಾ ಮತ್ತು ಇಬ್ನ್ ಮಸ್‌ಊದ್ ರ ಮದ್ಯೆ ಸಂಬಂಧ ಮುರಿದಿದೆ. ಎಂದಿರುವರು.

---

[99] ಮಜ್ಮಅಝ್ಝ್ವಾಯಿದ್ ಮಂಬಅಲ್ ಫವಾಯಿದ್–(–10/133/17103–17104–17105) ಅಬುಲ್ ಹಸನ್ ನೂರುದ್ದೀನ್ ಅಲೀ ಬಿನ್ ಅಬೀ ಬಕರ್ ಬಿನ್ ಸುಲೈಮಾನ್ ಅಲ್ ಹ್ಯಸಮೀ ಮರಣ ಹಿಜರಿ–807.(ಅಲ್ ಕುದ್ಸೀ ಪಬ್ಲಿಕೇಶನ್–ಕೈರೋ. ಹತ್ತು ಬಾಗಗಳಲ್ಲಿ.)

ಇಮಾಮ್ ಸಖಾವೀ ರಹಿಮಹುಲ್ಲಾಹ್. 'ಅಲ್ ಇಬ್ತಿಹಾಜ್ ಬಿ ಅಝ್ಕಾರಿಲ್ ಮುಸಾಫಿರಿ ವಲ್ ಹಾಜ್' ಗ್ರಂಥದ ಐದನೇ ಬಾಗದ ಮುವ್ವತ್ತೊಂಬತ್ತನೆ ಪುಟದಲ್ಲಿ. ಅದರ ಶೃಂಖಲೆ ಕ್ಷೀಣವಾಗಿದೆ, ಆದರೆ ಇಮಾಮ್ ನವವಿ ರಹಿಮಹುಲ್ಲಾಹ್ ಇದನ್ನು ದೊಡ್ಡ ಮಷಾಯಿಖರು ಪ್ರಾಯೋಗಕ್ಕೆ ತಂದಿರುವರು ಎಂದಿದ್ದಾರೆ. ನಾನು ಹೇಳುತ್ತೇನೆ ಅರಾಧನೆಯನ್ನು ಪ್ರಾಯೋಗಿಕವಾಗಿ ಮಾಡಲಾಗುವುದಿಲ್ಲ. ಕೆಲವೊಮ್ಮೆ ಅಗೋಚರ ಕಲ್ಪನೆಯಿಂದಾಗಿರ ಬಹುದು ಈ ಹದೀಸಿನಂತೆ. ಆದುದರಿಂದ ಪ್ರಾಯೋಗಿಕವಾಗಿ ಸರಿಯೆಂದು ಹೇಳಲು ಸಾದ್ಯವಿಲ್ಲ ಇನ್ನು ಕೆಲವರು ಇಸ್ತಿಗಾಸ(ಸಂಕಷ್ಟ ಸಮಯಗಳಲ್ಲಿ ಮೃತರೊಂದಿಗೆ ಪರಿಹಾರ ಕಾಣಲು)ವನ್ನು ಹಿಡಿದುಕೊಂಡಿರುವರು. ಅದು ವ್ಯೆಕ್ತವಾದ ಸಹಭಾಗಿತ್ವವಾಗಿದೆ. ಸಹಾಯವೆಲ್ಲವೂ ಅಲ್ಲಾಹನಿಂದಾಗಿದೆ.

ಅಬೂ ಇಸ್ಮಾಯೀಲ್ ಅಲ್ ಹರವೀ (ಜನನ ಹಿಜರಿ 396) ತನ್ನ 'ಝಮ್ಮುಲ್ ಕಲಾಮ್' –1/4/68 ರಲ್ಲಿ ಹೇಳುತ್ತಾರೆ. ಅಬ್ದುಲ್ಲ ಇಬ್ನುಲ್ ಮುಬಾರಕ್ ಒಮ್ಮೆ ಸಾಯಾನ ಸಮಯದಲ್ಲಿ ದಾರಿಕಾಣದಾದಾಗ ಆ ಸಂದಿಗ್ದ ಸಮಯದಲ್ಲಿ ಅವರಿಗೆ ದೊರೆತ ಸಹಾಯವಾಗಿದೆ ಇದಕ್ಕೆ ಪುರಾವೆ. ಅವಾಗ ಅವರು ಕರೆದರು ಅಲ್ಲಾಹನ ದಾಸರೆ ನನಗೆ ಸಹಾಯ ದೊರಕಿಸಿ! ಸಹಾಯವು ದೊರೆಯಿತು. ಅವರು ಹೇಳಿದರು ನಾನದನ್ನು ಕೇಳಿದೆನು ಅದರ ಶೃಂಖಲೆಯನ್ನು ನೋಡಲು. ಹರವಿ ಹೇಳುತ್ತಾರೆ: ಆ ಕರೆಯಂತೆ ಕರೆಯಲು ಅದರ ಶೃಂಖಲೆಯೇ ಸರಿಯಾಗಿಲ್ಲ.

ನಾನು ಹೇಳಿವೆನು; ಈ ರೀತಿಯಾಗಿದೆ ಜನರು ಹಿಂಬಾಲಿಸುವುದು.

'ತುಫ್ಹತುಝ್ಝಾಕಿರೀನ್' ನಲ್ಲಿ ಇಮಾಮ್ ಶೌಕಾನೀ ಹೇಳಿರುವುದು ಇದೇ ರೀತಿಯಾಗಿದೆ.

ಮತ್ತು ನಾನು ಹೇಳುತ್ತೇನೆ: ಪ್ರಾಯೋಗಿಕದಿಂದ ಸುನ್ನತ್ ಸಾಬೀತಾಗಲಾರದು, ಹಾಗೆಯೇ ಅದನ್ನು ಪ್ರವರ್ತಿಸುವವನು ಅದು ಸುನ್ನತ್ತಾಗಿದೆ ಎಂದು ದೃಢವಾಗಿ ವಿಶ್ವಾಸವಿರಿಸುವುದರಿಂದ ಮುಬ್ತದೀ ಆಗದೇ ಇರಲಾರನು.

ಮತ್ತು ನಾನು ಹೇಳುತ್ತೇನೆ: ಪ್ರಾಯೋಗಿಕದಿಂದ ಸುನ್ನತ್ ಸಾಬೀತಾಗಲಾರದು, ಹಾಗೆಯೇ ಅದನ್ನು ಪ್ರವರ್ತಿಸುವವನು ಅದು ಸುನ್ನತ್ತಾಗಿದೆ ಎಂದು ದೃಢವಾಗಿ ವಿಶ್ವಾಸವಿರಿಸುವುದರಿಂದ ಮುಬ್ತದೀ ಆಗದೇ ಇರಲಾರನು.

ಮತ್ತು ದುಆಅ ಕಬೂಲಾಗ ಬೇಕಾದರೆ ಒಂದು ಕಾರಣದಿಂದಲೇ ಆಗಬೇಕೆಂದೇನು ಇಲ್ಲ. ದುವಾಅ ಸ್ವೀಕಾರ ಪ್ರವಾದಿ ಸ.ರವರ ಸುನ್ನತ್ತಿನಿಂದಲೂ ಆಗಬಹುದು ಕೆಲವೊಮ್ಮೆ ಸುನ್ನತ್ತಾದ ತವಸ್ಸುಲ್ ಇಲ್ಲದೇ ಕರುಣಾಮಯನ ಕರುಣೆಯಿಂದಲೂ ಆಗುತ್ತದೆ, ಕೆಲವೊಮ್ಮೆ ಅಲ್ಲಾಹನು ಇಸ್ತಿದ್ರಾಜಿ(        ) ನಿಂದಲೂ ದುವಾಅ ಸ್ವೀಕರಿಸುತ್ತಾನೆ.[100]

ಮೇಲೆ ತಿಳಿಸಿದಂತಹಾ ಮೂರು ಹದೀಸಿಗಳಲ್ಲಿಯೂ ಇಸ್ತಿಆನ ಬಿಲ್ ಜಿನ್ನ್ ಅಥವಾ ಮೃತರೊಂದಿಗೆ ತವಸ್ಸುಲ್ ಮಾಡಲಾಗುವಂತಹ ಯಾವುದೇ ರೀತಿಯ ಪುರಾವೆಗಳು ಇವುಗಳಲ್ಲಿಲ್ಲ.

ಇನ್ನು ನಮ್ಮ ಪರಿಸರಗಳಲ್ಲಿ ಜಿನ್ನು ಗಳಿದೆಯೆಂದು ಅವುಗಳೊಂದಿಗೆ ಮೂಟೆಯನ್ನು ವಾಹನದಲ್ಲಿಡು, ಒಂದು ಕರ್ಜೂರ ತಂದು ಕೊಡು ಎಂದರೆ ಅದು ಶಿರ್ಕ್ ಆಗಲಾರದು ಎಂದು ಈ ಹದೀನ್ನು ಪುರಾವೆಯಾಗಿಸುತ್ತಾ ವಾದಿಸುವವರು ಇಂದು ಬಹಳಷ್ಟು ಜನರು ಕಂಡು ಬರುತ್ತದೆ. ಅವರಲ್ಲಿ ಹೇಳಲಿಕ್ಕಿರುವುದೊಂದೆ ಒಂದನೇಯದಾಗಿ ಈ ಹದೀಸ್ ಪ್ರಮಾಣಕ್ಕೆ

---

[100] ಸಿಲ್ ಸಿಲತುಲ್ ಅಹಾದೀಸು ಳ್ವಯೀಫಃ –2/109/656.(ಅಬೂ ಅಬ್ದುರ್ರಹ್ಮಾಮಾನ್ ಮುಹಮ್ಮದ್ ನಾಸಿರುದ್ದೀನ್ ಬಿನ್ ಅಲ್ ಹಾಜ್ ನೂಹ್ ಬಿನ್ ನಜಾತಿ ಬಿನ್ ಆದಮ್, ಅಲ್ ಅಲ್ ಆಶ್ಕೂದರೀ ಅಲ್ಬಾನಿ. ಮರಣ ಹಿಜರಿ:–1420. ಗ್ರಂಥದ ಮೊತ್ತ ಭಾಗ–14.) ಮುದ್ರಣ ದಾರುಲ್ ಮಆರಿಫ್ ರಿಯಾದ್, 1992 ಮೊದಲ ಆವೃತಿ.

–2/109/656

ಯೊಗ್ಯವಲ್ಲ. ಎರಡನೇಯದಾಗಿ ಇದರಲ್ಲಿ ಅಂತಹಾ ವಾದವೂ ಇಲ್ಲ, ಮೂರನೇಯದಾಗಿ ಆ ಹದೀಸ್ ಪ್ರಾಯೋಗಕ್ಕೆ ಅರ್ಹವೂ ಅಲ್ಲ.

ಶೈಖ್ ಫೌಝಾನ್ ಅಲ್ ಫೌಝಾನ್ ಹೇಳುತ್ತಾರೆ:

**وفي الحديث: «إذا استعنت فاستعن بالله»** .

الاستعانة: طلب العون، وهي على نوعين:

النوع الأول: الاستعانة بشيء لا يقدر عليه إلا الله، فهذه صرفها لغير الله شرك، من استعان بغير الله في شيء لا يقدر عليه إلا الله فإنه قد أشرك؛ لأنه صرف نوعًا من أنواع العبادة لغير الله عز وجل.

النوع الثاني: الاستعانة فيما يقدر عليه المخلوق، فأنت تستعين بأحد أن يبني معك الجدار، أو أن يحمل معك متاعك، أو أن يعينك على مطلوب مباح، كما قال تعالى: {وَتَعَاوَنُوا عَلَى الْبِرِّ وَالتَّقْوَى وَلَا تَعَاوَنُوا عَلَى الْإِثْمِ وَالْعُدْوَانِ} [المائدة: 2] فالاستعانة في الأمور العادية التي يقدر عليها الناس، هذا النوع لا بأس فيه؛ لأنه من التعاون على البر والتقوى، وقال صلى الله عليه وسلم: «والله في عون العبد ما دام العبد في عون أخيه» .

أما الاستعانة بالمخلوق في شيء لا يقدر عليه إلا الله؛ مثل جلب الرزق ودفع الضرر، فهذا لا يكون إلا لله، كالاستعانة بالأموات، والاستعانة بالجن والشياطين، والاستعانة بالغائبين، وهم لا يسمعونك تهتف بأسمائهم، هذا شرك أكبر؛ لأنك تستعين بمن لا يقدر على إعانتك.

فقوله تعالى: {إِيَّاكَ نَعْبُدُ وَإِيَّاكَ نَسْتَعِينُ} .

## ಹದೀಸ್ ' ಸಹಾಯ ಕೇಳುವ ಸಂದರ್ಭಬಂದಲ್ಲಿ ಅಲ್ಲಾಹನಲ್ಲಿ ಮಾತ್ರ ಸಹಾಯ ಕೇಳು' ಎನ್ನುವ ಹದೀಸಿನ ಬಗ್ಗೆ .

ಸಹಾಯ ಇಸ್ತಿಆನ: ಸಹಾಯ ಬೇಡುವುದು, ಎರಡು ರೀತಿಯಲ್ಲಿವೆ.

**ಒಂದನೇಯದು:** ಅಲ್ಲಾಹನ ಹೊತರು ಇತರರಿರೊಂದಿಗೆ ಸಾದ್ಯವಿಲ್ಲದ ಸಹಾಯವನ್ನು ಒಂದು ವಸ್ತುವಿನೊಂದಿಗೆ ಸಹಾಯ ಬೇಡುವುದು, ಅಲ್ಲಾಹನ ಹೊರತು ಇತರರೊಂದಿಗೆ ಮಾಡುವ(ಶಿರ್ಕ್) ಸಹಭಾಗಿತ್ವವಾಗಿದೆ. ಒಬ್ಬನು ಅಲ್ಲಾಹನ ಹೊರತು ಇತರರೊಂದಿಗೆ ಅವನಿಗೆ ಅಸಾದ್ಯವಾದ ಒಂದು ಕಾರ್ಯದ ಬಗ್ಗೆ ಸಹಾಯ ಬೇಡಿದರೆ ಅದು ಕಂಡಿತವಾಗಿಯೂ ಅವನು(ಅಲ್ಲಾಹನೊಂದಿಗೆ) ಶಿರ್ಕ್ ಮಾಡಿದನು ಕಾರಣ ಅಲ್ಲಾಹನಿಗಾಗಿ ಸಲ್ಲಿಸುವಂತಹ ಆರಾಧನೆಗಳಲ್ಲಿ ಒಂದಾಗಿದೆ.

**ಎರಡನೇಯದು:** ಸೃಷ್ಟಿಗಳಿಗೆ ಸಾದ್ಯವಾಗುವಂತಹ ಸಹಾಯ ಸೃಷ್ಟಿಗಳಲ್ಲಿ ಬೇಡುವುದು. ಉಧಾಹರಣೆಗೆ: ನಿನ್ನೊಂದಿಗೆ ಗೋಡೆಗಳನ್ನು ಕಟ್ಟಿ ನಿನಗೆ ಸಹಾಯ ಮಾಡುವುದೋ, ಅಥವಾ ನಿನ್ನೊಂದಿಗೆ ಸರಕು ಸಾಮಗ್ರಿಗಳನ್ನು ಹೊರುವುದೋ, ಅಥವಾ ಒಳಿತಾದ ಕಾರ್ಯಗಳಲ್ಲಿ ನಿನ್ನನ್ನು ಸಹಾಯ ಮಾಡುವುದೋ ಅಲ್ಲಾಹನು ಹೇಳಿದ ಹಾಗೆ:" **ಸತ್ಕರ್ಮ ಮತ್ತು ಧರ್ಮನಿಷ್ಠೆಯ ಕೆಲಸ ಕಾರ್ಯಗಳಲ್ಲಿ ಸರ್ವರೊಂದಿಗೆ ಸಹಕರಿಸಿರಿ ಮತ್ತು ಪಾಪದ ಹಾಗೂ ಅತಿಕ್ರಮದ ಕೆಲಸಗಳಲ್ಲಿ ಯಾರೊಂದಿಗೂ ಸಹಕರಿಸಬೇಡಿ."**

ಹೀಗಿರುವಾಗ ಮನುಷ್ಯನೊಂದಿಗಿರುವ ಸಾಧಾರಣ ಸಹಾಯಗಳನ್ನು ಬೇಡುವುದು ಅದು ಒಳ್ಳೆಯ ರೀತಿಯಾಗಿದೆ ಅದರಲ್ಲಿ ಯಾವ ರೀತಿಯ ತೊಂದರೆಗಳು ತೋರುವುದಿಲ್ಲ. ಕಾರಣ ಒಳಿತನ ಮತ್ತು ಭಕ್ತಿಯ ಮೇಲೆ ಮಾಡುವಂತಹದ್ದಾಗಿದೆ. ಪ್ರವಾದಿ ಸ. ರವರು ಹೇಳುತ್ತಾರೆ: **"ಒಬ್ಬ ದಾಸನು ತನ್ನ ಸಹೋದರನನ್ನು ಸಹಾಯ ಮಾಡುವ ಸಮಯಗಳಲೆಲ್ಲಾ ಅಲ್ಲಾಹನು ದಾಸನಿಗೆ ಸಹಾಯವನ್ನು ಒದಗಿಸುತ್ತಿರುವನು."**

ಅಲ್ಲಾಹನ ಹೊರತು ಸೃಷ್ಟಿಗೆ ಸಾದ್ಯವಿಲ್ಲದ ಸಹಾಯ ಸೃಷ್ಟಿಯೊಂದಿಗೆ ಬೇಡುವುದು. ಆಹಾರಗಳನ್ನು ಬೇಡುವುದು, ಸಂಕಷ್ಟಗಳನ್ನು ನೀಗಿಸಲು ಹೇಳುವುದು ಇವು ಅಲ್ಲಾಹನಿಗಲ್ಲದೆ ಯಾವಬ್ಬಿನಿಗೂ ಸಾದ್ಯವಿಲ್ಲದ್ದಾಗಿದೆ. ಮೃತರೊಂದಿಗೆ ಸಹಾಯಬೇಡುವುದು, ಜಿನ್ನು ಮತ್ತು ಶೈತಾನನೊಂದಿಗೆ ಸಹಾಯ ಬೇಡುವುದು, ಅಗೋಚರರೊಂದಿಗೆ ಸಹಾಯ ಬೇಡುವುದು ಈ ಹೇಳಿದ ಯಾವೊಬ್ಬರೂ ನಿಮ್ಮ ಮೊರಯನ್ನು ಕೇಳಲಾರರು. ಇದು ದೊಡ್ಡ

ಪಾಪವಾಗಿದೆ(ಶಿರ್ಕುನ್ ಅಕ್ಬರ್) ಕಾರಣ ನಿನಗೆ ಸಹಾಯ ಮಾಡಲಸಾಧ್ಯವಾದವರಲ್ಲಿ ನೀನು ಸಹಾಯ ಬೇಡುತ್ತಿರುವಿ.[101]

## ಮುಸ್ಲಿಂ ಜಿನ್ನಿನೊಂದಿಗಿರುವ ಸಹಾಯ

عَنْ أَبِي هُرَيْرَةَ، قَالَ قَالَ رَسُولُ اللَّهِ صلى الله عليه وسلم " **مَنْ سَلَكَ طَرِيقًا يَلْتَمِسُ فِيهِ عِلْمًا سَهَّلَ اللَّهُ لَهُ طَرِيقًا إِلَى الْجَنَّةِ** "

ಅಬೀ ಹುರೈರಾರಿಂದ ವರದಿ ಪ್ರವಾದಿ (ﷺ) ಹೇಳುತ್ತಾರೆ. "ಯಾವೊಬ್ಬನು ದೀನೀ ವಿದ್ಯಾಭ್ಯಾಸ ಮಾಡಲೊಸುಗ ಉತ್ತಮ ಮಾರ್ಗವನ್ನು ಸೇರಿದರೆ ಅಲ್ಲಾಹನು ಅವನಿಗೆ ಸ್ವರ್ಗದ ಮಾರ್ಗವನ್ನು ಸುಲಭವಾಗಿಸುವನು."

ಇಮಾಮ್ ಅಬ್ದುಲ್ ಅಝೀಝ್‌ಬಿನ್ ಅಬ್ದುಲ್ಲಾ ಬಿನ್ ಬಾಝ್ ರಹಿಮಹುಲ್ಲಾಹ್ ರೊಂದಿಗೆ ಅತ್ಯಗತ್ಯವಾದಗ ಮುಸ್ಲಿಂ ಜಿನ್ನಿನೊಂದಿಗೆ ರೋಗಶಮನಕ್ಕಾಗಿ ಅವುಗಳನ್ನು ಉಪಯೋಗಿಸಿಕೊಳ್ಳುವ ಬಗ್ಗೆ ಕೇಳಿದಾಗ ಅವರು ನೀಡಿದ ಉತ್ತರ ಹೀಗಿತ್ತು.

"لا ينبغي للمريض استخدام الجن في العلاج ولا يسألهم ، بل يسأل الأطباء المعروفين ، وأما اللجوء إلى الجن فلا ؛ لأنه وسيلة إلى عبادتهم وتصديقهم ؛ لأن في الجن من هو كافر ، ومن هو مسلم ، ومن هو مبتدع ، ولا تعرَف أحوالُهم ، فلا ينبغي الاعتماد عليهم ، ولا يسألون ، ولو تمثلوا لك ، بل عليك أن تسأل أهل العلم والطب من الإنس ، وقد ذم الله المشركين بقوله تعالى : ( وَأَنَّهُ كَانَ رِجَالٌ مِنْ الإِنسِ يَعُوذُونَ بِرِجَالٍ مِنْ الْجِنِّ فَزَادُوهُمْ رَهَقًا ) الجن/6 ؛

---

[101] ಶರಹು ಅಲ್‌ಉಸೂಲು ಸಲಾಸಃ–ಭಾಗ –6 ಪುಟ: 44

ولأنه وسيلة للاعتقاد فيهم والشرك ، وهو وسيلة لطلب النفع منهم والاستعانة بهم ، وذلك كله من الشرك

ಉತ್ತರ: ರೋಗಿಗೆ ಅವನ ಚಿಕಿತ್ಸೆಗಾಗಿ ಜಿನ್ನನ್ನು ಉಪಯೊಗಿಸುಕೊಳ್ಳುವುದೋ, ಅವುಗಳೊಂದಿಗೆ (ರೋಗಗಳ ಬಗ್ಗೆ) ಕೇಳಿತಿಳಿದು ಕೊಳ್ಳುವುದೋ ಸಮಂಜಸವಲ್ಲ. ಹೊರತು ಪ್ರಖ್ಯಾತ ದಾಕುದಾರುಗಳೊಂದಿಗೆ ಕೇಳಬೇಕು. ಜಿನ್ನಿನೊಂದಿಗೆ ಆಶ್ರಯ ಪಡೆಯುವುದು ಸರಿಯಲ್ಲ. ಕಾರಣ ಅದು ಅವಗಳನ್ನು ಆರಾಧಿಸುವುದಕ್ಕೂ , ವಾಸ್ತವೀಕರಿಸುವುದಕ್ಕೂ ಸೇರುವಂತಹದ್ದಾಗಿದೆ. ಅವುಗಳ ಮೇಲೆ ಹೊಂದಿಕೊಳ್ಳಬಾರದು ಅವುಗಳೊಂದಿಗೆ ಕೇಳಲೂ ಬಾರದು ಅವು ರೂಪಾಂತರ ಗೊಂಡರೂ ಸರಿ. ಆದರೆ ನೀನು ಮನುಷ್ಯರಾದ ವಿಧ್ಯಾ ಸಂಪನ್ನರಲ್ಲೋ, ದಾಕುದಾರುಗಳಲ್ಲೊ ಕೇಳಬೇಕಾಗಿದೆ. ಅಲ್ಲಾಹನು ಸೂರತುಲ್ ಜಿನ್‌ನ ಆರನೇ ಸೂಕ್ತದಲ್ಲಿ ಬುಹುದ್ಯೆವಾರದಕರನ್ನು ದೂರುತ್ತಾ ಹೇಳುತ್ತಾನೆ." ಕೆಲವು ಮಾನವರು ಜಿನ್ನ್ ಗಳ ಆಶ್ರಯ ಪಡೆದುದರಿಂದ ಅವರ(ಜಿನ್ನ್ ಗಳ) ಸಮೂಹವು ಮತ್ತಷ್ಟು ಗರ್ವಗೊಂಡವು."

ಕಾರಣ ಅದು ವಸೀಲಃ ವಾಗಿದೆ ಅದರಲ್ಲಿರು ವಿಶ್ವಾಸ ಶಿರ್ಕ್ ಆಗಿರುತ್ತದೆ. ಅದು ಅವುಗಳಿಂದ ಫಾಯಿದಗಳನ್ನು ಪಡೆಯುವಂತಹ ವಸೀಲವಾಗಿದೆ. ಮತು ಅವುಗಳಲ್ಲಿ ಸಹಾಯ(ಅಲ್ ಇಸ್ತಿಆನಃ) ಬೇಡುವುದೂ ಆಗಿರುತ್ತದೆ, ಅವುಗಳೆಲ್ಲವೂ ಶಿರ್ಕಿನಲ್ಲಿ ಸೇರಿದ್ದಾಗಿದೆ.[102]

ಅದೇ ರೀತಿ ಶೈಖ್ ಸಾಲೆಹಲ್ ಫೌಝಾನ್ ನವ್ವರಲ್ಲಹು ಮರ್ಕದಹು. ಈ ವಿಷಯವನ್ನು ವಿವರಿಸುತ್ತಾ ಹೇಳುತ್ತಾರೆ:

---

[102] `ಸಾಪ್ತಾಹಿಕ ಅದ್ದವಾಅ" ಸಂಚಿಕೆ 1602–ಸಂಪುಟ 1418, ಪುಟಃ 34

"لا يستعان بالجان ، لا المسلم منهم ولا الذي يقول إنه مسلم ؛ لأنه قد يقول مسلم وهو كذاب من أجل أن يتدخل مع الإنس ، فيُسد هذا الباب من أصله ، ولا يجوز الاستعانة بالجن ولو قالوا إنهم مسلمون ؛ لأن هذا يفتح الباب.

والاستعانة بالغائب لا تجوز سواء كان جنيّاً أو غير جني ، وسواء كان مسلماً أو غير مسلم ، إنما يستعان بالحاضر الذي يقدر على الإعانة ، كما قال تعالى عن موسى : ( ... فَاسْتَغَاثَهُ الَّذِي مِنْ شِيعَتِهِ عَلَى الَّذِي مِنْ عَدُوِّهِ ... ) القصص/15 ، هذا حاضر ويقدر على الإغاثة فلا مانع من هذا في الأمور العادية

ಅಗೋಚರವಾದವುಗಳಿಂದ ಸಹಾಯ ಬೇಡುವುದು ಸರಿಯಲ್ಲ ಅದು ಜಿನ್ನಾಗಲಿ ಅಥವ ಇತರ ಯಾವುದೇ ಆಗಿರಲಿ, ಇನ್ನದು ಮುಸ್ಲಿಮಾಗಿರಲಿ ಮುಸ್ಲಿಮೇತರವಾಗಿರಲಿ. ಸಹಾಯ ಬೇಡುವುದು ಪ್ರತ್ಯಕ್ಷವಾಗಿರುವ ಸಹಾಯಕ್ಕೆ ಸಾದ್ಯವಿರುವವರಲ್ಲಾಗಿದೆ. ಅಲ್ಲಾಹನು ಹೇಳಿದಹಾಗೆ." (ಮೂಸಾ)ಶತ್ರು ಪಾಳಯದವನ ವಿರುದ್ಧ ಅವರ ಸಹಾಯವನ್ನು ಬೇಡಿದರು". ಇದು ಪ್ರತ್ಯಕ್ಷವಾಗಿರುವ ಸಹಾಯಕ್ಕೆ ಸಾದ್ಯವಿರವವರೊಂದಿಗೆ ಬೇಡುವುದಾಗಿದೆ ಸಾಧಾರಣವಾಗಿ ಎಲ್ಲಾ ಕಾರ್ಯಗಳಲ್ಲಿ ಕೇಳುವಂತಹದ್ದಾಗಿದೆ ಇದನ್ನು ವಿರೋಧಿಸಲಾಗುವುದಿಲ್ಲ.[103]

## ರೋಗ ಚಿಕಿಸ್ತೆಗಾಗಿ ಜಿನ್ನಿನೊಂದಿಗೆ ಸಹಾಯ

[103] ಅಸ್ಸಿಹ್ರ್ ವಷ್ಷೂಊರುಝಃ ಪುಟ: 86–87

ರೋಗಶಮನಕ್ಕಾಗಿ ಜಿನ್ನಿನೊಂದಿಗೆ ಸಹಾಯ ಬೇಡುವುದೋ ಇತ್ಯಾದಿಗಳ ಬಗ್ಗೆ ವಿಚಾರಿಸಿದಾಗ ಇಮಾಮ್ ಅಬ್ದುಲ್ ಅಝೀಝ್‌ಬಿನ್ ಅಬ್ದುಲ್ಲಾ ಬಿನ್ ಬಾಝ್ ರಹಿಮಹುಲ್ಲಾಹ್ ಹೇಳುತ್ತಾರೆ:

( هذا أقبح من الشرك بالله سبحانه ، فالواجب تركه ، والحذر من ذلك ، والتواصي بتركه ، والإنكار على من فعله ، ومن عرف من الناس بهذه الأعمال الشركية ، لم تجز مناكحته ، ولا أكل ذبيحته ، ولا الصلاة عليه ، ولا الصلاة خلفه ، حتى يعلن التوبة إلى الله سبحانه من ذلك ويخلص الدعاء والعبادة لله وحده )

"ಅದು ಕೆಟ್ಟದ್ದಾಗಿದೆ ಅಲ್ಲಾಹ್ ಸುಬಹಾನಹು ನೊಂದಿಗೆ ಸಹಭಾಗತ್ವಗಳಲ್ಲಿ ಸೇರಿದ್ದಾಗಿದೆ. ಕಡ್ಡಾಯವಾಗಿ ಅದನ್ನು ತ್ಯೇಜಿಸಬೇಕಾದದ್ದಾಗಿದೆ. ಅಲ್ಲದೇ ಅದರಿಂದ ಜಾಗ್ರತರಾಗಬೇಕಾಗಿದೆ. ಇತರೊಂದಿಗೆ ತ್ಯೇಜಿಸಲು ಹೇಳಬೇಕು ಅದನ್ನು ಮಾಡುವವರನ್ನು ವಿರೋಧಿಸಬೇಕು, ನಿಮ್ಮಲ್ಲಿ ಯಾರಾದರೂ ಹಾಗೇನಾದರೂ ಮಾಡುವುದಾಗಿ ಕಂಡಲ್ಲಿ ಅಂತಹವರೊಂದಿಗೆ ವಿವಾಹ ಸರಿಯಾಗುವುದಿಲ್ಲ ಅವರು ಕ್ಯೊದದನ್ನು ತಿನ್ನಬಾರದು ಅವರೊಂದಿಗೆ ನಮಾಝು ನಿರ್ವಹಿಸಬಾರದು ಅವರಿಗೆ ನಮಾಝು ಮಾಡಬಾರದು ಅವರು ತೌಬಾ ವನ್ನು ಮಾಡಿ ಅಲ್ಲಾಹನೊಂದಿಗೆ ಖಾಲಿಸಾಗಿ ದುವಾ ಮಾಡಿ ಆರಾದನೆ ಅಲ್ಲಾಹನಿಗೆ ಮಾತ್ರ ಮಾಡುವವರೆಗೆ".[104]

**ಸವೂದಿ ಅರೇಬಿಯಾದ ಫತ್ವಾ ಕಮೀಟಿ ಸೂರತ್ ಅನ್‌ಆಂ ಸೂಕ್ತ 128 ಮತ್ತು 129 ರ ಆಧಾರದಲ್ಲಿ ನೀಡಿರುವ ಫತ್ವಾದಲ್ಲಿ ಹೇಳಿರುವುದು ಈ ರೀತಿ ಇವೆ:**

---

104 `ಇಖಾಮತುಲ್ ಬರಾಹೀನ್ ಅಲಾ ಹುಕುಮು ಮನ್ ಇಸ್ತಿಗಾಸ ಬಿಗೈರಿಲ್ಲಾಃ'– ಪುಟ:30 ಮಜ್ಮೂಅ ಅಲ್ ಫತಾವ ಮಖಾಲಾತುಲ್ ಮುತನವ್ವಿಅ. ಪುಟ–126.

( الاستعانة بالجن واللجوء إليهم في قضاء الحاجات من الإضرار بأحد أو نفعه شرك في العبادة ، لأنه نوع من الاستمتاع بالجن بإجابته سؤاله وقضائه حوائجه في نظير استمتاع الجني بتعظيم الإنسي له ولجوئه إليه ، واستعانته به في تحقيق رغبته ، قال الله تعالى : " ويوم يحشرهم جميعا يا معشر الجن قد استكثرتم من الإنس ، وقال أولياؤهم من الإنس ربنا استمتع بعضنا ببعض وبلغنا أجلنا الذي أجلت لنا ، قال النار مثواكم خالدين فيها إلا ما شاء الله إن ربك حكيم عليم ، وكذلك نولي بعض الظالمين بعضا بما كانوا يكسبون " الأنعام : 128 - 129 ، وقال تعالى : " وأنه كان رجال من الإنس يعوذون برجال من الجن فزادوهم رهقا " الجن : 6 ، فاستغاثة الإنسي بالجني في إنزال ضرر بغيره واستعانته به في حفظه من شر من يخاف شره كله شرك ، ومن كان هذا شأنه فلا صلاة له ولا صيام لقوله تعالى : " لئن أشركت ليحبطن عملك ولتكونن من الخاسرين " الزمر : 65 ، ومن عرف عنه ذلك فلا يصلى عليه إذا مات ، ولا تتبع جنازته ، ولا يدفن في مقابر المسلمين ) ( فتاوى اللجنة الدائمة 1/ 407-408)

ಇಸ್ತಿಆನ ಜಿನ್ನಿನೊಂದಿಗೆ , ಅದರೊಂದಿಗೆ ಆಶ್ರಯಪಡೆಯುವುದು, ಒಬ್ಬನ ಸಂಕಷ್ಟಗಳ ಸಮಯದಲ್ಲಿ ಅಗತ್ಯಗಳನ್ನು ಪೂರ್ಯಸುವುದರ ಬಗ್ಗೆ ಮತ್ತು ಅವುಗಳೊಂದಿಗಿರುವ ಉಪಕಾರಗಳು ಆರಾಧನೆಯಲ್ಲಿ ಬರುವಂತಹ ಶಿರ್ಕ್ಆಗಿರುತ್ತದೆ. ಕಾರಣ ಅದು ಜಿನ್ನಿನೊಂದಿಗಿರುವ

ಇಸ್ತಿಂತಾಅ(ಲಾಭಪಡೆಯುವಂತಹ) ಅಗಿರುತ್ತದೆ ಅವುಗಳ ಉತ್ತರಗಳಲ್ಲೂ, ಅಗತ್ಯಗಳನ್ನು ಪೂರ್ಯಸುವಲ್ಲೂ, ಒಂದು ರೀತಿಯಲ್ಲಿ ಜಿನ್ನುಗಳನ್ನು ಬಹುಮಾನಿಸುತ್ತಾ ಮನುಷ್ಯನು ಅವುಗಳೊಂದಿಗೆ ಆಶ್ರಯ ಪಡೆಯುತ್ತ ಲಾಭ ಪಡೆಯುದಾಗಿದೆ. ಅದರಲ್ಲಿರುವ ಇಸ್ತಿಆನ(ಸಹಾಯ ಬೇಡುವುದು) ಅದರೊಂದಗಿರುವ ಅತಿಯಾದ ಅಸೆ ಅಲ್ಲಾಹನು ಹೇಳುತ್ತಾನೆ:

'ಅವನು (ಅಲ್ಲಾಹನು) ಅವರೆಲ್ಲರನ್ನೂ ಒಟ್ಟುಗೂಡಿಸುವ ದಿನ. (ಅವನು ಜಿನ್ನ್‌ಗಳೊಂದಿಗೆ ಹೇಳುವನು): 'ಓ ಜಿನ್ನ್ ಸಮೂಹವೇ! ಮನುಷ್ಯರ ಪೈಕಿ ಅನೇಕ ಜನರನ್ನು ನೀವು ದಾರಿಗೆಡಿಸಿರುವಿರಿ.'[105] ಮನುಷ್ಯರಲ್ಲಿ ಸೇರಿದ ಅವರ ಆಪ್ತಮಿತ್ರರು ಹೇಳುವರು: 'ನಮ್ಮ ಪ್ರಭೂ! ನಮ್ಮಲ್ಲಿ ಕೆಲವರು ಇತರ ಕೆಲವರಿಂದ ಸುಖಾನುಭೂತಿಯನ್ನು ಪಡೆದಿರುವರು.[106] ತರುವಾಯ ನೀನು ನಮಗೆ ನಿಶ್ಚಯಿಸಿದ ಅವಧಿಯನ್ನು ನಾವು ತಲುಪಿರುವೆವು.' ಅವನು ಹೇಳುವನು: 'ನರಕಾಗ್ನಿಯೇ ನಿಮ್ಮ ವಾಸಸ್ಥಳ! ಅಲ್ಲಾಹು ಇಚ್ಛಿಸಿದ ವಿನಾ ನೀವದರಲ್ಲಿ ಶಾಶ್ವತವಾಗಿ ವಾಸಿಸುವಿರಿ.' ಖಂಡಿತವಾಗಿಯೂ ತಮ್ಮ ಪ್ರಭು ಯುಕ್ತಿಪೂರ್ಣನೂ ಸರ್ವಜ್ಞನೂ ಆಗಿರುವನು.

ಹೀಗೆ ನಾವು ಆ ಅಕ್ರಮಿಗಳ ಪೈಕಿ ಕೆಲವರನ್ನು ಕೆಲವರಿಗೆ ಮಿತ್ರರನ್ನಾಗಿ ಮಾಡುವೆವು. ಅವರು ಸಂಪಾದಿಸುತ್ತಿದ್ದುದರ ಫಲವಾಗಿ.[107]

ಕಡ್ಡಾಯವಾಗಿಯೂ ಮನುಷ್ಯರಲ್ಲಿ ಕೆಲವರು ಜಿನ್ನ್‌ಗಳಲ್ಲಿ ಸೇರಿದ ಕೆಲವರೊಂದಿಗೆ ಅಭಯವನ್ನು ಯಾಚಿಸುತಿದ್ದರು. ಇದು ಅವರಿಗೆ (ಜಿನ್ನ್‌ಗಳಿಗೆ) ಗರ್ವವನ್ನು ಅಧಿಕಗೊಳಿಸಿತು.[108]

---

[105] ಜಿನ್ನ್‌ಗಳಲ್ಲಿ ಸೇರಿದ ಸೈತಾನರು ನಾವು ತಿಳಿಯದ ರೀತಿಯಲ್ಲಿ ನಮ್ಮನ್ನು ದಾರಿಗೆಡಿಸಲು ಸದಾ ಪ್ರಯತ್ನಿಸುತ್ತಿರುವರೆಂದು ಕುರ್‌ಆನ್ ನಮಗೆ ಎಚ್ಚರಿಕೆ ನೀಡಿದೆ.

[106] ಸೈತಾನರು ದುರ್ಬೋಧನೆ ಮಾಡುವುದು ತಾತ್ಕಾಲಿಕವಾದ ಲಾಭ, ಸಂತೋಷ, ಸುಖಾನುಭೂತಿಯನ್ನು ತರುವಂತಹ ಮತ್ತು ಮುಂದೆ ಗುರುತರವಾದ ಶಿಕ್ಷೆಗೆ ಕಾರಣವಾಗುವಂತಹ ವಿಷಯಗಳನ್ನಾಗಿವೆ.

[107] ಸೂರಃ ಅಲ್ ಅನ್‌ಆಂ ಸೂಕ್ತ–128–129

[108] ಸೂರಃ ಅಲ್ ಜಿನ್ನ್, ಸೂಕ್ತ–6

ಮನುಷ್ಯನು ಅವನಿಗೊದಗುವ ಸಂಕಷ್ಟಗಳಗೆ ಇತ್ಯಾದಿಗಳಿಗೆ ಜಿನ್ನಿನೊಂದಿಗೆ ಸಹಾಯಗಳನ್ನು ಪಡೆಯುತಿದ್ದದೂ. ಅವನು ಹೆದರುವಂತಹ ಕೆಡುಕುಗಳಿಂದ ರಕ್ಷಣೆಕೋರುವುದೂ ಎಲ್ಲಾವೂ ಶಿರ್ಕಾಗಿರುತ್ತದೆ. ಯಾರಾದರೂ ಈ ರೀತಿ ಮಾಡಿದ್ದಲ್ಲಿ ಅವನ ನಮಾಝು, ವ್ರತ ಯಾವುದೂ ಸ್ವೀಕಾರವಲ್ಲ ಅಲ್ಲಾಹನು ಹೀಳಿದಂತೆ: ಸಂದೇಶವಾಕರೇ! ನೀವು ಹಲವರನ್ನು ಆರಾಧಿಕರಾಗಿ ಬಿಟ್ಟರೆ ನಿಮ್ಮ ಎಲ್ಲಾ ಕರ್ಮಗಳು ವ್ಯರ್ತವಾಗುವುದು ಮತ್ತು ನೀವು ನಷ್ಟ ಅನುಭವಿಸಿದವರ ಸಾಲಿಗೆ ಸೇರುವಿರೆಂದು ನಿಮಗೂ ನಿಮ್ಮ ಹಿಂದಿನವರಿಗೂ ದಿವ್ಯವಾಣಿಯನ್ನು ಕಳಿಸಲಾಗಿತ್ತು.[109].

ಯಾರಾದರೂ ಇಂತಹ ಕೆಲಸಗಳನ್ನು ಮಾಡುವುದಾಗಿ ಕಂಡಲ್ಲಿ ಅವನ ಜನಾಝು ನಮಾಝುನ್ನು ನಿರ್ವಹಿಸಬೇಡಿ, ಅವನ ಜನಾಝುವನ್ನು ಹಿಂಬಾಲಿಸಬೇಡಿ, ಅವನನ್ನು ಮುಸಲ್ಮಾನರ ಕಬರಸ್ತಾನಗಳಲ್ಲಿ ಮರೆಮಾಚ ಬೇಡಿ.[110]

## ರೋಗ ಚಿಕಿಸ್ತೆಗಾಗಿ ಜಿನ್ನಿನೊಂದಿಗೆ ಸಹಾಯ

ರೋಗ ಶಮನಕ್ಕಾಗಿ ಜಿನ್ನಿನೊಂದಿಗೆ ಹೋಗುವುದೋ ಅವುಗಳಲ್ಲಿ ರೋಗಗಳ ಬಗ್ಗೆ ಕೇಳಿತಿಳಿದುಕೊಳ್ಳುವುದೋ ಮಾಡುವಂತಹ ಕಾರ್ಯಗಳನ್ನು ಪ್ರವಾದಿ ಸ.ರವರು ವಿರೋಧಿಸಿರುವರು. ಇಸ್ಲಾಮಿನ ಬುನಾದಿ ಖುರ್ಆನ್ ಮತ್ತು ಸುನ್ನತಿನಲ್ಲಾಗಿರುವುದು ಪ್ರತೀಯೊಬ್ಬ ಮುಸಲ್ಮಾನನು ಅರಿತಿರಬೇಕಾದ ವಿಷಯವಾಗಿದೆ ಹೊರತು ಪೌರಾಣಿಕ ಪುರೋಹಿತರ ಅಭಿಪ್ರಾಯಗಳ ಮೇಳೆ ಇಸ್ಲಾಮ್ ದೀನ್ ನೆಲೆ ನಿಂತಿಲ್ಲ. ಪೌರಾಣಿಕ ಪುರೋಹಿತರ ನುಡಿಗಳು ಖುರ್ಆನ್ ಸುನ್ನತಿನ ಕಿರಣಗಳಾಗಿದ್ದಲ್ಲಿ ಕಂಡಿತಾವಾಗಿಯೂ ಸ್ವೀಕರಸಿಬೇಕಾಗಿದ್ದೇ ಆಗಿರುತ್ತದೆ. ಹೊರತು ಅವುಗ ಮರೆಯಲ್ಲಿ ಸ್ವಂತ ಅಭಿಪ್ರಾಯಗಳನ್ನು ಸಾದಾತುಗಳೆಂದೋ, ಅವುಲಿಯಾವುಗಳೆಂದೋ

---

[109] ಸೂರಃ ಅಲ್ ಝುಮರ್–ಸೂಕ್ತ–65

[110] ಫತಾವಃ ಲಜನತು ದಾಯಿಮಃ –1/408–407

ಅಗ್ರಗಣ್ಯರೆಂದೋ ಜನಸಾಮಾನ್ಯರ ಎಡೆಯಲ್ಲಿ ಹರಿಯಬಿಡುವುದನ್ನು ಇಸ್ಲಾಮ್ ಎಂದು ಸ್ವೀಕರಿಸುವುದಿಲ್ಲ. ಅಗ್ರಗಣ್ಯ, ವಿಧ್ಯಾಸಾಗರ, ಪ್ರಖ್ಯಾತರೂ ಆದ ಶೈಖುಲ್ ಇಸ್ಲಾಮ್ ಇಬ್ನ್ ತಿಮೀಯ ರಹಿಮಹುಲ್ಲಾಹ್ ರವರ ಕೆಲವು ಅಭಿಪ್ರಾಯಗಳು ಒಂದೋ ಅವರ ಉದ್ದೇಶ ಬೇರೆಯಾಗಿರ ಬಹುದೂ ಅಥವಾ ಅವರ ಸ್ವತಃ ಅನಿಸಿಕೆ ಯಾಗಿರಬಹುದು ಅಂತಹ ಕೆಲವು ಅಭಿಪ್ರಾಯಗಳನ್ನು ಅವರು ಹೇಳಿರುವರು ಆದರೆ ಪೌರಾಣಿಕ ಮುಸ್ಲಿಂ ಪಂಡಿತವರ್ಗವೂ ಅಂದೇ ಅದನ್ನು ಸರಿಯಾದ ರೀತಿಯಲ್ಲಿ ಜನಸಮೂದಯಕ್ಕೆ ಅರ್ಥ್ಯಸಿಕೊಟ್ಟಿರುವರು. ಜಿನ್ನ್ ವಿಷಯಗಳ ಬಗ್ಗೆ ಅವರ ಪ್ರಖ್ಯಾತಿ ಪಡೆದ ಗ್ರಂಥ 'ಫತುಹುಲ್ ಮನ್ನಾನ್ ಫೀ ಜಮ್‌ಯಿ ಕಲಾಮು ಶೈಖುಲ್ ಇಸ್ಲಾಮ್ ಇಬ್ನ್ ತೀಮೀಯ' ದ ಟಿಪ್ಪಣಿಯಲ್ಲಿ ಶೈಖ್ ಮುಹಮ್ಮದ್ ಇಬ್ನ ಸಾಲೆಹಲ್ ಉಸ್ಯಮೀನ್ ಹೇಳುತ್ತಾರೆ:

وقد اتخذ بعض الرقاة كلام شيخ الإسلام رحمه الله متكئاً على مشروعية الإستعانة بالجن المسلم في العلاج بأنه من الأمور المباحة ولا أرى في كلام شيخ الإسلام ما يسوغ لهم هذا فإذا كان من البدهيات المسلّم بها أن الجن من عالم الغيب يرانا ولا نراه الغالب عليه الكذب معتد ظلوم غشوم لا يعرف العذر بالجهل مجهولة عدالته لذا روايته للحديث ضعيفة فما هو المقياس الذي نحكم به على أن هذا الجني مسلم وهذا منافق وهذا صالح وذاك طالح ؟

لذا الاستعانة بالجن المسلم (كما يدعي البعض ) في العلاج لا تجوز للأسباب التالية:

أولاً : قد ثبت أن النبي صلى الله عليه وسلم رقى ورُقي وأمر أصحابه

بالرقية فاجتمع بذلك فعله وأمره وإقراره صلى الله عليه وسلم فلو كانت الاستعانة بالجن المسلم كما يدعي البعض فضيلة ما ادخرها الله عن رسوله صلى الله عليه وسلم يوم سحرته يهود ولا عن أصحابه رضي الله عنهم وهم خير الخلق وأفضلهم بعد أنبيائه وفيهم من أصابه الصرع وفيهم من أصابته العين وفيهم من تناوشته الأمراض من كل جانب فما نقلت لنا كتب السنة عن راق فيهم استعان بالجن.

ثانياً : الاستعانة بالجني المسلم ـ كما يدعي البعض ـ تعلق قلب الراقي بهذا الجني وهذا ذريعة لتفشي استخدام الجن مسلمهم وكافرهم ومن ثم يصبح وسيلة من وسائل الشرك بالله جل وعلا وخرق ثوب التوحيد ومن فهم مقاصد الشريعة تبين له خطورة هذا الأمر فما قاعدة ( سد الذرائع ) إلا من هذا القبيل.

ثالثاً : يجب المفاصلة بين الراقي بالقرآن والساحر ـ عليه لعنة الله ـ وهذا الأمر فيه مشابهة لفعل السحرة فالساحر يستعين بالجن ويساعدونه ويقضون له بعض حوائجه لذا قد يختلط الأمر على من قلّ حظه من العلم فيساوي بين الراقي بالقرآن والساحر فيروج بذلك سوق السحرة وهذا من المفاسد العظيمة على العقيدة.

رابعاً : من المعلوم أن الجن أصل خلقته من النار والنار خاصيتها الإحراق فيغلب على طبعه الظلم والاعتداء وسرعة التقلب والتحول من حال إلى حال فقد ينقلب من صديق إلى ألد الأعداء ويذيق صاحبه

سـوء العـذاب لأنـه أصـبح خبـيراً بنقـاط ضـعفه.

احـذر عـدوك مـرة واحـذر صـديقك ألـف مـره

فلربمـا انقلـب الصـديق فكـان أعلـم بالمضـرة

فمـن أراد الـتخلص مـن هـذا الأمـر فليستشـعر أن الحـق في اتبـاع النـبي صـلى الله عليـه وسـلم وصـحابته رضـي الله عـنهم أجمعـين والتـابعين مـن أئمـة الهـدى والتقـى والـدين وليـترك التعـرج علـى كـل مـا خـالف طـريقتهم كئنا ما كان فهل بعد سبيل الله ورسوله إلاّ سبيل الشيطان؟ والله اعلم

ಮುಸ್ಲಿಂ ಜಿನ್ನಿನೊಂದಿಗೆ ರೋಗ ಶಮನಕ್ಕಾಗಿ ಇಸ್ತಿಆನತು(ಸಹಾಯ) ಪಡೆಯುವುದನ್ನು ಕೆಲವು ರುಖಾತ್( ರುಖಿಯ ಮಾಡುವವರು) ಅನುವದನೀಯವಾಗಿರುತ್ತದೆ ಎಂದು ಶೈಖುಲ್ ಇಸ್ಲಾಂ ಇಬ್ನ್ ತೀಮೀಯ ಹೇಳಿರುವುದನ್ನು ಅದು ಉತ್ತಮವಾದ ಕಾರ್ಯಗಳಲ್ಲಿ ಸೇರಿದೆಂದು ಅವರನ್ನು ಹಿಂಬಾಲಿಸಿರುವರು.

ನನಗನಿಸುವುದಲ್ಲ ಶೈಖುಲ್ ಇಸ್ಲಾಮ್ ಇಬ್ನ್ ತೀಮೀಯರವರ ಮಾತಲ್ಲಿ ಇದನ್ನು ಅನುವದನೀಯವೆಂದಿರುವುದು. ಒಂದು ವೇಳೆ ಒಪ್ಪಿಸುವಂತಹ ಸೂತ್ರಕ್ಕಾಗಿ ಹೇಳಿದ್ದರೂ ಜಿನ್ ಅಗೋಚರ ಲೋಕದಲ್ಲಾಗಿದೆ. ಅವನು ನಮ್ಮನ್ನು ನೋಡುವನು ಸುಳ್ಳಾದ ರೀತಿಯಲ್ಲದೇ ಸಾದಾರಣವಾಗಿ ಅವನನ್ನು ನೋಡಲು ಅಸಾದ್ಯ ಉದೇಶಪೂರ್ವಕವಾಗಿ ಮಾಡುವಂತಹ ಅಕ್ರಮಗಳ ಔದಾರ್ಯ ಅಜ್ಞಾನದ ಕಾರಣದಿಂದ ಒಪ್ಪಿಕೊಳ್ಳಲು ಸಾದ್ಯವಿಲ್ಲ ಅದು ಅಜ್ಞಾತವಾದ ಅನ್ಯಾಯವಾದವಾಗಿವೆ. ಆದುದರಿಂದಲೇ ಅವುಗಳಿಗಿರುವ ವರದಿ ಗಳು ಕ್ಷೀಣವಾದ ಹದೀಸಿಗಳಿಂದದಾಗಿದೆ. ಅದ್ಯಾವ ಅಳತೆಗೋಲಿನಿಂದ ಈ ಜಿನ್ನು ಮುಸ್ಲಿಮಾಗಿದೆ ಅಥವಾ ಮುನಾಫಿಕಾಗಿದೆ, ಸ್ವಾಲಿಹಾಗಿದೆ. ಎಂದು ವಿಧಿಹೇಳಲು ಸಾದ್ಯ?.

ಆದುದರಿಂದ ಇಸ್ತಿಆನ ಮುಸ್ಲಿಂ ಜಿನ್ನಿನೊಂದಿಗೆ ಚಿಕಿತ್ಸೆ (ಕೆಲವರು ಹೇಳುವಂತೆ)ಅನುವದನೀಯವಲ್ಲ ಈ ಕೆಳಗಿರುವ ಕಾರಣಗಳಿಂದ.

ಒಂದನೇಯದಾಗಿ: ಪ್ರವಾದಿ ಸ.ರವರಿಂದ ಸಾಬೀತಾಗಿ ಬಂದಿರವುದಾಗಿದೆ ರುಖೀಯ, ಸ್ವಹಾಬಿಗಳಿಗೆ ಅದೇಶಿಸಿರುವುದೂ ಆಗಿರುತ್ತದೆ. ಅವುಗಳನ್ನು ಎಲ್ಲರೂ ಸೇರಿ ಮಾಡುತ್ತಲೂ ಇದ್ದರು. ಇಂದು ಕೆಲವು ಶ್ರೇಷ್ಟ ಪಂಡಿತರು(ಅಲ್ಲಾಹು ಅವರನ್ನು ಕರುಣೆತೋರಲಿ) ಹೇಳುವಂತೆ ಜಿನ್ನಿನೊಂದಿಗೆ ಇರುವ ಇಸ್ತಿಆನ ಅನುವದನೀಯವಾದಲ್ಲಿ ಪ್ರವಾದಿ ಸ.ರವರು ಅವರಿಗೆ ಯಹೂದಿ ಸಿಹ್ರ್ ಮಾಡಿದಾಗ ಅವರು ಜಿನ್ನಿನೊಂದಿಗೆ ಸಹಾಯ ಕೇಳಬೇಕಾಗಿತ್ತು ಸ್ವಹಾಬಿಗಳು ಅದನ್ನು ಮಾಡಬೇಕಿತ್ತು. ಅವರಲ್ಲವೇ ಅಂಬಿಯಾರ ಅಲ್ಯಹಿಸ್ಸಲಾಮರ ನಂತರ ಶ್ರೇಷ್ಟವಾದವರು. ಅವರಲ್ಲಿ ಕಣ್ಣುಗಳ ಉಪದ್ರಗಳು ಇದ್ದವು, ಎಲ್ಲಾ ರೀತಿಯ ರೋಗಗಳಿಂದ ಅವರೂ ಬಳಲುತ್ತಿದ್ದರು, ಅವರೆಲ್ಲಿಯೂ ರೋಗ ಶಮನಕ್ಕಾಗಿ ಜಿನ್ನಿನೊಂದಿಗೆ ಇಸ್ತಿಅನ ಮಾಡಿದವರಲ್ಲ.

ಎರಡನೇಯದಾಗಿ: ಮುಸ್ಲಿಂ ಜಿನ್ನಿನೊಂದಿಗಿರುವ ಇಸ್ತಆನಃ ಕೆಲವರು ಹೇಳುವಂತೆ ರೋಗನಿವಾರಿಸಿವವನ ಹೃದಯವು ಆ ಜಿನ್ನಿನೊಂದಿಗೆ ಹೊಂದಿಕೊಂಡಿದೆ ಇದೊಂದು ಕಾರಣವಾಗಿದೆ; ಮುಸ್ಲಿಂ ಅಥವಾ ಕಾಫಿರ್ ಜಿನ್ನು ಅವನು ಮಾಡಿದೆ ಸೇವೆಗೆ ಕೊಡುವ ಪ್ರತಿಫಲವಾಗಿದೆ. ಅಲ್ಲಾಹನಲ್ಲಿ ಸಹಭಾಗಿತ್ವಮಾಡುದಕ್ಕೆ ಸೇರಿಸುವ ಮಾರ್ಗಗಳಲ್ಲೊಂದು ಮಾರ್ಗವಾಗಿದೆ.(ಅಂದರೆ ಅದು ಶೀರ್ಕಾಗಿದೆ) ಶರೀಅತ್ತಿನ ಉದ್ದೇಶದಲ್ಲಿ ಅರ್ಥಮಾಡುವುದಾದರೆ ಇದು ತೌಹೀದಿನ ವಸ್ತ್ರವನ್ನು ಹರಿದಂತಾಗಿದೆ.

ಅಲ್ಲದೇ ಶರೀಅತ್ತಿನ ಉದ್ದೇಶಗಳನ್ನು ಅರಿಯುವಂತಹಗಳಲ್ಲಾಗಿದೆ ಈ ಕಾರ್ಯದಿಂದ ಬಹಳಷ್ಟು ನಷ್ಟಗಳು ಪ್ರತ್ಯಕ್ಷಗೊಳ್ಳುತ್ತವೆ (ಕಾರಣಗಳನ್ನು ನಿಲ್ಲಿಸುವುದು) ಮಾಡುವುದಲ್ಲದೇ ಬೇರೆ ಮಾರ್ಗವಿಲ್ಲ.

ಮೂರನೇಯದಾಗಿ: ಕಡ್ಡಾಯವಾಗಿ ಖುರ್ಆನಿನಿಂದ ರೋಗಶಮನ ಮಾಡುವವರು ಮತ್ತು ಮಾಟಮಾಡುವವರ ಮಧ್ಯೆ ವಿದೂರಗಳ ಆಗತ್ಯವಿದೆ.ಅವರ ಮೇಲೆ ಅಲ್ಲಾಹನ ಶಾಪವಿದೆ. ಈ ಮಾಟ ಮಾಡುವವರ ಪ್ರವರ್ತಿಗಳ ವಿಷಯ ಗೊಂದಲಮಯವಾಗಿರುವುದಾಗಿದೆ. ಮಾಟಮಾಡುವವನು ಜಿನ್ನಿನ ಸಹಾಯಕ್ಕೆ ಮೊರೆಹೋಗುವನು ಅವು ಅವನಿಗೆ ಸಹಾಯ ಮಾಡುತ್ತದೆ ಅಲ್ಲದೇ ಕೆಲವು ಅಗತ್ಯಗಳನ್ನು ಪೂರೈಸಿ ಸಹಾ ಕೊಡುತ್ತದೆ. ಆದುದರಿಂದ ದೀನಿನ ವಿಧ್ಯೆ ಕಡಿಮೆ ಇರುವವನ ವಿಷಯದಲ್ಲಿ ಈ ವಿಷಯ ತಲಮಲಗೊಂಡಿವೆ ಅವಾಗ ಅವನು ಖುರ್ಆನಿನಿಂದ ರೋಗಶಮನ ಮಾಡುವವನಿಗೂ ಮಾಟಮಂತ್ರಮಾಡುವವನೊಂದಿಗೂ ಯಾವ ವ್ಯೆತ್ಯಾಸವನ್ನೂ ಅರಿಯಲಾರನು. ಹೀಗಿರವಾಗ ಅಂತಹಾ ಮಾಟಗಾರನ ವಾಣಿಜ್ಯ ಊರೆಲ್ಲಾ ಪ್ರಚಾರವಾಗುತ್ತದೆ. ಇದು ವಿಶ್ವಾಸದ ಮೇಲೆ ಬೀರುವ ಘೋರ ಭೃಷ್ಟಾಚಾರವಾಗಿದೆ.

ನಾಲ್ಕನೇಯದಾಗಿ: ತಿಳುವಳಿಕೆಗಾಗಿ ಜಿನ್ನಿನ ಅಸಲು ಅಗ್ನಿಯಿಂದ ಸೃಷ್ಟಿಸಿದ್ದಾಗಿದೆ. ಅಗ್ನಿಯ ಪ್ರತ್ಯೇಖತೆ ಸುಡುವುದಾಗಿದೆ ಅದರ ಶಾರೀರಿಕ ಮಾರ್ಪಾಡು ಅಕ್ರಮ, ದ್ವೇಷ, ಒಂದು ಅವಸ್ತೆಯಿಂದ ಇನೊಂದವಸ್ತೆಗೆ ಮಾರ್ಪಡುವುದು, ಸ್ನೇಹಿಸದವನ್ನು ದ್ವೇಷಿಸಿ ಅವನಿಗೆ ಅದರ ಸ್ವಾದವನ್ನು ಮುಟ್ಟಿಸುವುದು. ಮನುಷ್ಯನ ದೌರ್ಬಲ್ಯದ ಅಂಶವೇ ಅದರ ಅನುಭವಕ್ಕೆ ಕಾರಣ.

ನಿನ್ನ ಶತ್ರುವನ್ನು ಒಮ್ಮೆ ಹೆದರಿದರೆ ನಿನ್ನ ಸ್ನೇಹಿತನ್ನನು ಸಹಸ್ರಬಾರಿ ಹೆದರು. ಕೆಲವೊಮ್ಮೆ ನಿನ್ನ ಸ್ನೇಹಿತ ನಿನ್ನ ಮೇಲೆ ತಿರುಗಿದರೆ ಅದೊಂದು ಮಹಾ ಉಪದ್ರವವಾಗುವುದು.

ಇವುಗಳಿಂದ ಮುಕ್ತಿಗೊಳ್ಳ ಬೇಕಾದರೆ ಜ್ಞಾನವನ್ನು ಯಾತಾರ್ಥ ಪ್ರವಾದಿ ಸ.ರವರನ್ನು ಅವರ ಸ್ವಹಾಬತ್ತನ್ನು ಮತ್ತು ತಾಬೀಯೀಗಳನ್ನು ಹಾಗೂ ಸನ್ಮಾರ್ಗದಲ್ಲಿರುವ ಭಕ್ತಿಯಿಂದಿರುವ ದೀನಿನಲ್ಲಿರುವ ಇಮಾಮರುಗಳನ್ನು

ಹಿಂಬಾಲಿಸು ನಿನ್ನ ಮೇಲೆರಗುವ ಎಲ್ಲಾ ದೀನಿಗೆ ವಿರೋದವಾಗಿರುವವುಗಳನ್ನೂ ಸನ್ಮಾರ್ಗದ ವಿರುದ್ದವಿರುವವುಗಳನ್ನು ಬಿಟ್ಟುಬಿಡು. ಅವುಗಳೆಲ್ಲಾ ಶೈತಾನನ ಮಾರ್ಗವಲ್ಲದೇ ಬೇರೆಮಾರ್ಗವಲ್ಲ. ಅಲ್ಲಾಹನು ಹೆಚ್ಚು ಬಲ್ಲವನು.[111]

## ಜಿನ್ನಿನೊಂದಿಗಿರುವ ಸಹಾಯಗಳ ಬಗ್ಗೆ ಅಹ್ಲುಲ್ ಇಲ್ಮಿನವರಲ್ಲಿಯ ಅಭಿಪ್ರಾಯ

**القول الصحيح فى هذه المسألة أنه لا يجوز الاستعانة بالجن المسلم ولاغيره لضعف أدلة المجيزين فقد تم ردها ومناقشتها ولقوة أدلة المانعين وهذا هو رأى جماهير العلماء المعاصرين وإليك بعضا من فتاويهم:**

**ಈ ವಿಷಯದಲ್ಲಿರುವ ಸರಿಯಾದ ಮಾತು ಮುಸ್ಲಿಮ್ ಜಿನ್ನಿನೊಂದಿಗೋ ಅಥವಾ ಇತರರೊಂದಿಗೆ ಇಸ್ತಿಆನ: ಅನುವದನೀಯವಲ್ಲ ಕ್ಷೀಣವಾದ ಸಾಪ್ತಾಹಿಕಗಳ ಪುರಾವೆಗಳಿಂದ, ಅದರ ಬಗ್ಗೆ ಇರುವ ವಾದ ಪ್ರತಿವಾದಗಳು, ವಿರೋದಗಳು ಶಕ್ತಿಯುತವಾದ ವಿರೊಧಿಸುವವರ ಪುರಾವೆಗಳಿಂದ ಪೂರ್ಣಗೊಂಡಿದೆ. ಇಂದಿರುವ ಬಹುಪಕ್ಷ ಉಲಮಾಅರ ಅಭಿಪ್ರಾಯಗಳಲ್ಲಿಯ ಫತಾವ:ಗಳ ಕೆಲವನ್ನು ನಿಮ್ಮ ಮುಂದೆ ಇಡುತ್ತೇವೆ.**

**1– سؤال طرح على اللجنة الدائمة للبحوث العلمية والإفتاء عن حكم الإستعانة بالجن فكان الجواب**

1. **ಇಸ್ತಿಆನಃ ಬಿಲ್‌ಜಿನ್‌ನ ಬಗ್ಗೆ ಲಜ್ನತುದಾಯಿಮ.. ವಲ್‌ಇಫ್ತಾಅ ದೊಂದಿಗೆ ಪ್ರಶ್ನೆಕೇಳಿದಾಗ ಅವರು ನೀಡಿದ ಉತ್ತರ.**

لا تجوز الاستعانة بالجن في معرفة نوع الإصابة ونوع علاجها لأن الإستعانة بالجن شرك . قال الله تعالى (( وأنه كان رجال من الإنس يعوذون برجال من

[111] ಫತಹುಲ್ ಮನ್ನಾನ್–ಪುಟ–218–219.

الجن فزادوهم رهقا )) ، وقال تعالى (( ويوم يحشرهم جميعاً يمعشر الجن قد استكثرتم من الإنس وقال أولياؤهم من الإنس ربنا استمتع بعضنا ببعض وبلغنا أجلنا الذي أجلت لنا قال النار مثواكم خالدين فيها إلا ما شاء الله إن ربك حكيم عليم )) ومعنى الإستمتاع بعضهم ببعض أن الإنس عظموا الجن وخضعوا لهم واستعانوا بهم والجن خدموهم بما يريدون أحضروا لهم ما يطلبون ، ومن ذلك إخبارهم بنوع المرض وأسبابه مما يطلع عليه الجن دون الإنس وقد يكذبون فإنهم لا يؤمنون ولا يجوز تصديقهم[112].

التوقيع: اللجنة الدائمة للبحوث العلمية والإفتاء .

ಉಪದ್ರಗಳನ ರೀತಿಯನ್ನು ತಿಳಿಯುವ, ಅಥವಾ ರೋಗಗಳ ರೀತಿಯನ್ನು ತಿಳಿಯುವ ಸಲುವಾಗಿ ಜಿನ್ನಿನೊಂದಿಗೆ ಸಹಾಯ ಅನುವದನೀಯವಲ್ಲ. ಜಿನ್ನಿನೊಂದಿಗೆ ಸಹಾಯ ಶಿರ್ಕ್(ಅಲ್ಲಾಹನೊಂದಿಗೆ ಸಹಭಾಗಿತ್ವವಾ)ಗಿದೆ. ಅಲ್ಲಾಹನು ಹೇಳುತ್ತಾನೆ: ಕಡ್ಡಾಯವಾಗಿಯೂ ಮನುಷ್ಯರಲ್ಲಿ ಕೆಲವರು ಜಿನ್ನ್‌ಗಳಲ್ಲಿ ಸೇರಿದ ಕೆಲವರೊಂದಿಗೆ ಅಭಯವನ್ನು ಯಾಚಿಸುತಿದ್ದರು. ಇದು ಅವರಿಗೆ (ಜಿನ್ನ್‌ಗಳಿಗೆ) ಗರ್ವವನ್ನು ಅಧಿಕಗೊಳಿಸಿತು. ಮತು ಅಲ್ಲಾಹನು ಹೇಳುತ್ತಾನೆ: ಅವನು (ಅಲ್ಲಾಹು) ಅವರೆಲ್ಲರನ್ನೂ ಒಟ್ಟುಗೂಡಿಸುವ ದಿನ. (ಅವನು ಜಿನ್ನ್‌ಗಳೊಂದಿಗೆ ಹೇಳುವನು): 'ಓ ಜಿನ್ನ್ ಸಮೂಹವೇ! ಮನುಷ್ಯರ ಪೈಕಿ ಅನೇಕ ಜನರನ್ನು ನೀವು ದಾರಿಗೆಡಿಸಿರುವಿರಿ.'[113] ಮನುಷ್ಯರಲ್ಲಿ ಸೇರಿದ ಅವರ ಆಪ್ತಮಿತ್ರರು ಹೇಳುವರು: 'ನಮ್ಮ ಪ್ರಭೂ! ನಮ್ಮಲ್ಲಿ ಕೆಲವರು ಇತರ

---

[112] ಫತಾವಃ ಲಜ್ನತುದಾಯಿಮ ಅಲ್ ಮಜ್ಮೂಅ ಅಸ್ಸಾನಿಯ:-1/92-93(ಸಹೀಯೊಂದಿಗೆ ಶೈಖ್ ಅಬ್ದುಲ್ ಅಝೀಝ್ ಬಿನ್ ಬಾಝ್, ಅಶ್ಶೈಖ್ ಅಬ್ದುಲ್ ಅಝೀಝ್ ಆಲ್ ಶೈಖ್, ಅಶ್ಶೈಖ್ ಸಾಲೆಹಲ್ ಫೌಝಾನ್, ಆಶ್ಶೈಖ್ ಅಬೂಬಕ್ಕರ್ ಅಬೂ ಝ್ಯುದ್,)

[113] ಜಿನ್ನ್‌ಗಳಲ್ಲಿ ಸೇರಿದ ಸೈತಾನರು ನಾವು ತಿಳಿಯದ ರೀತಿಯಲ್ಲಿ ನಮ್ಮನ್ನು ದಾರಿಗೆಡಿಸಲು ಸದಾ ಪ್ರಯತ್ನಿಸುತ್ತಿರುವರೆಂದು ಕುರ್‌ಆನ್ ನಮಗೆ ಎಚ್ಚರಿಕೆ ನೀಡಿದೆ.

ಕೆಲವರಿಂದ ಲಾಭಗಳನ್ನು ಪಡೆದಿರುವರು.[114] ತರುವಾಯ ನೀನು ನಮಗೆ ನಿಶ್ಚಯಿಸಿದ ಅವಧಿಯನ್ನು ನಾವು ತಲುಪಿರುವೆವು.' ಅವನು ಹೇಳುವನು: 'ನರಕಾಗ್ನಿಯೇ ನಿಮ್ಮ ವಾಸಸ್ಥಳ! ಅಲ್ಲಾಹು ಇಚ್ಛಿಸಿದ ವಿನಾ ನೀವದರಲ್ಲಿ ಶಾಶ್ವತವಾಗಿ ವಾಸಿಸುವಿರಿ.' ಖಂಡಿತವಾಗಿಯೂ ತಮ್ಮ ಪ್ರಭು ಯುಕ್ತಿಪೂರ್ಣನೂ ಸರ್ವಜ್ಞನೂ ಆಗಿರುವನು.[115] ಅಲ್ ಇಸ್ತಿಂತಾಅ(ಒಬ್ಬರಿಂದೊಬ್ಬರು ಲಾಭ ಪಡಯುವುದು, ಸುಖಾನುಭೂತಿ ಅನುಭವಿಸುವುದು) ಅಂದರೆ ಜಿನ್ನ್ ಗಳನ್ನು ಬಹುಮಾನಿಸುತ್ತಾ ವಿನಮ್ರತೆಯೊಂದಿಗೆ ಸಹಾಯಗಳನ್ನು ಪಡೆದುಕೊಳ್ಳುವರು. ಆವಾಗ ಜಿನ್ನ್ ಗಳು ಜನರ ಉದ್ದೇಶಕ್ಕೆ ಅನುಗುಣವಾಗಿ ಸೇವೆಗಳನ್ನು ಮಾಡುತ್ತಾ ಅವರು ಬೇಡಿದ್ದನ್ನು ತಲುಪಿಸುತ್ತಲೂ ಅರಾಧಕನ ಸೇವೆಗೆ ಸನ್ನದ್ಧರಾಗುತ್ತಾರೆ. ಮನುಷ್ಯನಲ್ಲದೇ ಜಿನ್ನ್ ಅವನಲ್ಲಿ ಪ್ರತ್ಯೇಕ್ಷವಾಗಿ(ಅವನಿಗೆ ಸಂದೇಶಗಳನ್ನು ನೀಡುತ್ತಾ) ರೋಗಗಳ ರೀತಿ ಮತ್ತು ಕಾರಣಗಳ ವರ್ತಮಾನಗಳನ್ನು ನೀಡುತ್ತವೆ. ಜಿನ್ನುಗಳು ಸುಳ್ಳುಹೇಳುವುದಾಗಿದೆ ಅವುಗಳನ್ನು ವಿಶ್ವಾಸಕ್ಕೆ ತೆಗೆದು ಕೊಳ್ಳಬಾರದು ಮತ್ತು ವಾಸ್ತವೀಕರಿಸುವುದೂ ಅನುವದನೀಯವಲ್ಲ.

ಲಜ್ನತುದಾಯಿಮ ಫತಾವಃ ಸಂಖ್ಯೆ 321 ರಲಿಯ ವಿವರಣೆ.

- **سؤال الى اللجنة الدائمة للإفتاء برئاسة سماحة الشيخ ابن باز – رحمه الله**: هل يجوز لمسلم أن يكتب الأسماء الروحانية " الجن أو الملائكة " أو أسماء الله الحسنى أو غير ذلك من الحرز والعزيمة المشهورة عند العلماء الروحانيين بإرادة حفظ البدن من شر الجن والشيطان والسحر؟

[114] ಜಿನ್ನ್‌ಗಳು ದುರ್ಬೋಧನೆ ಮಾಡುವುದು ತಾತ್ಕಾಲಿಕವಾದ ಸುಖಾನುಭೂತಿಯನ್ನು ತರುವಂತಹ ಮತ್ತು ಮುಂದೆ ಗುರುತರವಾದ ಶಿಕ್ಷೆಗೆ ಕಾರಣವಾಗುವಂತಹ ವಿಷಯಗಳನ್ನಾಗಿವೆ.

[115] ಸೂರಃ ಅನ್‌ಆಂ–128

ಇಮಾಮುಲ್ ಹುದಾ ಶ್ಯೇಖ್ ಬಿನ್ ಬಾಝ್ ರೊಂದಿಗೆ ಪ್ರಶ್ನೆ: ಒಬ್ಬ ಮುಸಲ್ಮಾನನಿಗೆ ರೂಹಾನಿಗಳ ಹೆಸರನ್ನು ಬರೆಯುವುದು, ಜಿನ್ನ್ ಮತು ಮಲಾಯಿಕತರ ಹೆಸರನ್ನು ಬರೆಯುವುದು ಅಥವಾ ಅಲ್ಲಾಹನ ನಾಮಗಳನ್ನೋ ಅಥವಾ ಇತ್ಯಾದಿ ಪ್ರಖ್ಯಾತ ಉಲಮಾಅರ ರೂಹಾನಿಗಳ ಹೆಸರನ್ನು ದೈನಂದಿನವಾಗಿ ಮಾಟ ಮತ್ತು ಜಿನ್ನ್ ಹಾಗೂ ಶ್ಯೆತಾನರ ಉಪದ್ರವಗಳಿಂದ ಆತ್ಮ ರಕ್ಷಣೆಗಾಗಿ ಜಪಿಸುತ್ತಾ ಬರುವುದು ಅನುವವದನೀಯವೇ?

الجواب : الاستعانة بالجن أو الملائكة والاستغاثة بهم لدفع ضر أو جلب نفع أو للتحصن من شر الجن شرك أكبر يخرج عن ملة الإسلام والعياذ بالله سواء كان ذلك بطريق ندائهم أو كتابة أسمائهم وتعليقها تميمة أو غسلها وشرب الغسول أو نحو ذلك إذا كان يعتقد أن التميمة أو الغسل تجلب له النفع أو تدفع عنه الضر دون الله .

وأما كتابة أسماء الله تعالى وتعليقها تميمة فقد أجازه بعض السلف وكرهه بعضهم لعموم النهي عن التمائم واعتبار تعليقها ذريعة الى تعليق غيرها من التمائم الشركية . ولأن تعليقها يعرضها للأوساخ والأقذار ، وفي ذلك امتهان لها . وهذا هو الصواب .

ಉತ್ತರ: ಜಿನ್ನಿನೊಂದಿಗೋ , ಅಥವಾ ಮಲಾಯಿಕತ್ತರೊಂದಿಗೋ, ಸಹಾಯವೋ ಪರಿಹಾರವೋ ಸಂಕಷ್ಟಗಳ ನಿವಾರಣೆಗೆ ಅಥವಾ ಲಾಭಗಳನ್ನು ಪಡೆಯಲು ಅಥವಾ ಜಿನ್ನಿನ ಉಪದ್ರವಗಳಿಂದ ಮುಕ್ತಿಹೊಂದಲು ಕೇಳುವಂತಹದ್ದು ಅಲ್ಲಾಹನಲ್ಲಿಯ ಸಹಭಾಗಿತ್ವವಾಗಿರುತ್ತದೆ. ಇಸ್ಲಾಮಿನಿಂದ ಹೊರ ಹೊಮ್ಮುವಂತ ಕಾರ್ಯವಾಗಿರತ್ತದೆ. ಆದುದರಿಂದ ಅಲ್ಲಾಹನಲ್ಲಿ ರಕ್ಷಣೆ ಪಡೆಯಿರಿ ಅದು ನೀವು ಜಿನ್ನನ್ನು ಕರೆಯುವ ರೀತಿಯಲ್ಲಾಗಲಿ, ಅಥವಾ ಅವುಗಳ ಹೆಸರನ್ನು ಬರೆಯುವುದರಿಂದಾಗಲಿ ಅಥವಾ ತಾಯಿತವನ್ನು

ನೇತುಹಾಕುವ(ದೇಹದ ಯಾವುದಾದರೊಂದು ಬಾಗದಲ್ಲಿ ಅಥವಾ ಕೋಣೆಯ ಯಾವುದಾದರು ಮೂಲೆಯಲ್ಲಾಗಲಿ ಮಾಡುವ) ರೀತಿಯಲ್ಲಾಗಲಿ ಅಥವಾ ಶಿರ್ಕಾದ ತಾಯಿತಗಳನ್ನು ರೀತಿಯಲ್ಲಿ ಬೇರೆ ಏನಾದರೂ ನೇತು ಹಾಕುವುದೊ(ಸರಿಯಲ್ಲ) ಕಾರಣ ನೀವು ನೇತುಹಾಕುತ್ತಿರುವವುಗಳಲ್ಲಿ ಗಲೀಜುಗಳು ಮತ್ತು ಕಸಗಳು ಇರುತ್ತವೆ. ಅದು ನಿಮ್ಮ ಪರೀಕ್ಷೆಯಾಗಿರ ಬಹುದು. ಇದು ಸರಿಯಾದ ಮಾತಾಗಿದೆ.[116]

**2– سئل سماحة الشيخ عبد العزيز بن عبدالله بن باز عن حكم استخدام الجن من المسلمين في العلاج إذا لزم الأمر ؟**

ಇಮಾಮ್ ಅಬ್ದುಲ್ ಅಝೀಝ್‌ಬಿನ್ ಅಬ್ದುಲ್ಲಾ ಬಿನ್ ಬಾಝ್ ರಹಿಮಹುಲ್ಲಾಹ್ ರೊಂದಿಗೆ ಅತ್ಯಗತ್ಯವಾದಗ ಮುಸ್ಲಿಂ ಜಿನ್ನಿನೊಂದಿಗೆ ರೋಗಶಮನಕ್ಕಾಗಿ ಅವುಗಳನ್ನು ಉಪಯೋಗಿಸಿಕೊಳ್ಳುವ ಬಗ್ಗೆ ಕೇಳಿದಾಗ ಅವರು ನೀಡಿದ ಉತ್ತರ ಹೀಗಿತ್ತು.

**فأجاب – رحمه الله –** : ( لا ينبغي للمريض استخدام الجن في العلاج ولا يسألهم ، بل يسأل الأطباء المعروفين ، وأما اللجوء إلى الجن فلا يجوز لأنه وسيلة إلى عبادتهم وتصديقهم ، لأن في الجن من هو كافر ومن هو مسلم ومن هو مبتدع ، ولا تعرف أحوالهم فلا ينبغي الاعتماد عليهم ولا يسألون ، ولو تمثلوا لك ، بل عليك أن تسأل أهل العلم والطب من الإنس وقد ذم الله المشركين بقوله تعالى : ( وَأَنَّهُ كَانَ رِجَالٌ مِنْ الإِنسِ يَعُوذُونَ بِرِجَالٍ مِنْ الْجِنِّ فَزَادُوهُمْ رَهَقًا ) ( سورة الجن – الآية 6 ) ، ولأنه وسيلة للاعتقاد فيهم

[116] ಫತಾವಃ ಲಜ್ನತು ದಾಯಿಮ ಸಂಖ್ಯೆ –321

والشرك ، وهو وسيلة لطلب النفع منهم والاستعانة بهم ، وذلك كله من الشرك
(

ಉತ್ತರ: ರೋಗಿಗೆ ಅವನ ಚಿಕಿತ್ಸೆಗಾಗಿ ಜಿನ್ನನ್ನು ಉಪಯೋಗಿಸುಕೊಳ್ಳುವುದೋ, ಅವುಗಳೊಂದಿಗೆ (ರೋಗಗಳ ಬಗ್ಗೆ) ಕೇಳಿತಿಳಿದು ಕೊಳ್ಳುವುದೋ ಸಮಂಜಸವಲ್ಲ. ಹೊರತು ಪ್ರಖ್ಯಾತ ದಾಕುದಾರುಗಳೊಂದಿಗೆ ಕೇಳಬೇಕು. ಜಿನ್ನಿನೊಂದಿಗೆ ಆಶ್ರಯ ಪಡೆಯುವುದು ಸರಿಯಲ್ಲ. ಕಾರಣ ಅದು ಅವಗಳನ್ನು ಆರಾಧಿಸುವುದಕ್ಕೂ , ವಾಸ್ತವೀಕರಿಸುವುದಕ್ಕೂ ಸೇರುವಂತಹದ್ದಾಗಿದೆ. ಅವುಗಳ ಮೇಲೆ ಹೊಂದಿಕೊಳ್ಳಬಾರದು ಅವುಗಳೊಂದಿಗೆ ಕೇಳಲೂ ಬಾರದು ಅವು ರೂಪಾಂತರ ಗೊಂಡರೂ ಸರಿ. ಆದರೆ ನೀನು ಮನುಷ್ಯರಾದ ವಿಧ್ಯಾ ಸಂಪನ್ನರಲ್ಲೂ, ದಾಕುದಾರುಗಳಲ್ಲೂ ಕೇಳಬೇಕಾಗಿದೆ. ಅಲ್ಲಾಹನು ಸೂರತುಲ್ ಜಿನ್‌ನ ಆರನೇ ಸೂಕ್ತದಲ್ಲಿ ಬುಹುದ್ಯೆವಾರದಕರನ್ನು ದೂರುತ್ತಾ ಹೇಳುತ್ತಾನೆ." ಕೆಲವು ಮಾನವರು ಜಿನ್ನ್ ಗಳ ಆಶ್ರಯ ಪಡೆದುದರಿಂದ ಅವರ(ಜಿನ್ನ್ ಗಳ) ಸಮೂಹವು ಮತ್ತಷ್ಟು ಗರ್ವಗೊಂಡವು."

ಕಾರಣ ಅದು ವಸೀಲಃ ವಾಗಿದೆ ಅದರಲ್ಲಿರು ವಿಶ್ವಾಸ ಶಿರ್ಕ್ ಆಗಿರುತ್ತದೆ. ಅದು ಅವುಗಳಿಂದ ಫಾಯಿದಗಳನ್ನು ಪಡೆಯುವಂತಹ ವಸೀಲವಾಗಿದೆ. ಮತು ಅವುಗಳಲ್ಲಿ ಸಹಾಯ(ಅಲ್ ಇಸ್ತಿಆನಃ) ಬೇಡುವುದೂ ಆಗಿರುತ್ತದೆ, ಅವುಗಳೆಲ್ಲವೂ ಶಿರ್ಕಿನಲ್ಲಿ ಸೇರಿದ್ದಾಗಿದೆ.[117]

**وقد سئل العلامة الشيخ محمد ناصر الدين الألباني – رحمه الله – هاتفيا ما هو حكم**
الاستعانة بالجن ؟

**ಶೈಖ್ ಮುಹಮ್ಮದ್ ನಾಸಿರುದ್ದೀನ್ ಅಲ್ಬಾನಿ ರಹಿಮಹಲ್ಲಾಹ್ ರಲ್ಲಿ ಫೋನ್ ಸಂಭಾಷಣೆಯ ಮುಖಾಂತರ ಇಸ್ತಿಆನತು ಬಿಲ್‌ಜಿನ್ನ್‌ನ ಬಗ್ಗೆ ಕೇಳಿದಾಗ:**

117 `ಸಾಪ್ತಾಹಿಕ ಅದ್ದವಾಅ" ಸಂಚಿಕೆ 1602–ಸಂಪುಟ 1418, ಪುಟಃ 34

-**فأجاب** بكلام مطول ولكني أختصره بالآتي-: يرى – حفظه الله– عدم جواز ذلك ، وقد بين أن هذا من الأمور المغيبة عن الإنسان ولا نستطيع أن نحكم على هؤلاء بالإسلام أو الكفر ، فإن كانوا مسلمين لا نستطيع أن نحكم عليهم بالصلاح أو النفاق ، وقد استشهد – حفظه الله - بالآية الكريمة من سورة الجن : ( وَأَنَّهُ كَانَ رِجَالٌ مِنْ الإِنسِ يَعُوذُونَ بِرِجَالٍ مِنْ الْجِنِّ فَزَادُوهُمْ رَهَقًا ) ، وتم تأكيد ذلك بالاتصال بسماحته وأخذ رأيه والاستئذان في نشر ذلك فأقر -حفظه الله — بذلك

ಶ್ಯೇಖ್ ರವರು ನೀಳವಾದ ಉತ್ತರ ನೀಡಿದ್ದರು ಅದನ್ನು ಇಲ್ಲಿ ಸಂಕ್ಷಿಪ್ತಗೊಳಿಸಿ ಬರೆಯುತ್ತಿದ್ದೇನೆ:- ಅವರ ಪ್ರಕಾರ ಜಿನ್ನಿನೊಂದಿಗಿರುವ ಸಹಾಯ ಅನುವದನೀಯವಲ್ಲ. ಅದು ಮನುಷ್ಯನಿಗೆ ಅಗೋಚರವಾದ ವಿಷಯಗಳಲ್ಲಾಗಿರುತ್ತದೆಂದು ತಿಳಿದಂತಹಾ ವಿಷಯವಾಗಿರುತ್ತದೆ. ಅವುಗಳ ಬಗ್ಗೆ ನಮಗೆ ವಿಧಿಹೇಳಲು ಅಸಾದ್ಯ ಅವರು ಮುಸ್ಲಿಮರೋ ಅಥವಾ ಅಮುಸ್ಲಿಮರೊ ಎಂದು. ಒಂದು ವೇಳೆ ಮುಸ್ಲಿಮಾದರೂ ನಮಗೆ ಅವರ ಮೇಲೆ ಉತ್ತಮರೋ ಅಥವ ಕಪಟಿಗಳೋ ಎಂದು ಹೇಳಲು ಸಾದ್ಯವಿಲ್ಲ. ಅಲ್ಲಾಹನು ಖುರ್ಆನಿನ ಸೂರತು ಜಿನ್ನ್ ನಲ್ಲಿ ಉಲ್ಲೇಖಿಸುತ್ತಾನೆ. ." ಕೆಲವು ಮಾನವರು ಜಿನ್ನ್ ಗಳ ಆಶ್ರಯ ಪಡೆದುದರಿಂದ ಅವರ(ಜಿನ್ನ್ ಗಳ) ಸಮೂಹವು ಮತ್ತಷ್ಟು ಗರ್ವಗೊಂಡವು." ಇದನ್ನು ಪ್ರಕಾಶನಗೊಳಿಸಲು ಶ್ಯೇಖ್ ರಲ್ಲಿ ಅನುವಾದ ಪಡೆದು ಪ್ರಕಾಶನ ಗೊಳಿಸಿದೆವು.

ಅಶ್ಶೇಖ್ ಸ್ವಾಲೆಹ್ ಆಲುಶ್ಶೇಖ್[118] ಹಫಿಳಹುಲ್ಲಾ. ಹೇಳುತ್ತಾರೆ:

**يقول الشيخ صالح آل الشيخ . حفظه الله .**: إذا كان الاستخدام بطلب الخدمة من الجني المسلم فهذا وسيلة إلى الشرك، ولا يجوز أن يعالج عند أحد يعرف منه أنه يستخدم الجن المسلمين. وإذا كانت الخدمة بغير طلب منه فينبغي له أن يستعيذ بالله من الشياطين ويستعيذ بالله من شر مردة الجن،لأنه قد يؤدي قبول خبرهم واعتماده إلى حصول الأنس بهم وقد يقوده ذلك الاستخدام إلى التوسل بهم، والتوجه إليهم . والعياذ بالله .)

ಇನ್ನು ಸೇವಗಳ ಬಗ್ಗೆ ಮುಸ್ಲಿಂ ಜಿನ್ನಿನೊಂದಿಗೆ ಸೇವೆಗಳನ್ನು ಬೇಡುವಂತಹದ್ದು ವಸೀಲತ್ತು ಶಿರ್ಕ್ (ಬಹುದೇವತಾ ಸಿಂದ್ಧಾಂತಕ್ಕೆ ಮುಟ್ಟುವಂತಹದ್ದಾಗಿದೆ.)[119] ಮುಸ್ಲಿಂ ಜಿನ್ನಿನೊಂದಿಗೆ ಸೇವೆಗಳನ್ನು

---

[118] ಸಾಲೆಹ್ ಬಿನ್ ಅಬ್ದುಲ್ ಅಝಿಝ್ ಬಿನ್ ಮುಹಮ್ಮದ್ ಬಿನ್ ಇಬ್ರಾಹೀಮ್ ಬಿನ್ ಅಬ್ದುಲ್ಲತ್ವೀಫ್ ಆಲು ಶ್ಶೇಖ್. (ವಝೀರು ಶುಊನ್ ಅಲ್ ಇಸ್ಲಾಮಿಯಃ ವಲ್ ಅವುಖಾಫ್ ವದವತುಲ್ ಇರಷಾದ್ ಸವೂದಿ ಅರಬೀಯಃ ಹಿಜರಿ 1420 ರಿಂದ 1436 ವರೆಗೆ.)

[119] ಮಾದ್ಯಮಗಳು: (ಅಲ್ ವಸಾಯಿಲ್) ಎನ್ನುವುದು ಮಾದ್ಯಮದ ಬಹುವಚನವಾಗಿದೆ ಅದು: ಇನ್ನೊಂದರ ಹೊರತು ಇರಲಾರದು. ಆದುದರಿಂದ ಇದನ್ನು ಶರಅನಲ್ಲಿ ನಿರಂತರವಾಗಿ ಉಪಯೋಗಿಸಲಾಗುವುದು. ಹರಾಮಿಗೆ ಮುಟ್ಟುವ ಮಾದ್ಯಮ ಹರಾಮಾಗಿದೆ, ವಾಜಿಬಿಗೆ ಮುಟ್ಟುವುದು ವಾಜಿಬಾಗಿದೆ, ಸುನ್ನತಿಗೆ ಮುಟ್ಟುವಂತಹದ್ದು ಸುನ್ನತ್ತಾಗಿದೆ, ಮಕ್ರೂಹ್ ಗೆ ಮುಟ್ಟುವಂತಹದ್ದು ಮಕ್ರೂಹ್ ಆಗಿದೆ, ಮುಬಾಹಿಗೆ ಮುಟ್ಟುವಂತಹದ್ದೂ ಮುಬಾಹಾಗಿದೆ, ಅದೇ ರೀತಿ ಶಿರ್ಕಿಗೆ ಮುಟ್ಟುವಂತಹದ್ದು ಶಿರ್ಕಾಗಿದೆ. ಹೀಗಿರುವಾಗ ವಸೀಲ(ಮಾದ್ಯಮ)ದಲ್ಲಿರುವ ಅಪಾಯ ಅದು ಮುಟ್ಟುವಂತಹದ್ದರಲ್ಲಾಗಿರುತ್ತದೆ, ಅಲ್ಲದೇ ಬಹಳ ಅಪಾಯಕರವಾದ ವಸೀಲ ಅಂದರೆ ಅದು ಅಲ್ಲಾಹನೊಂದಿಗಿರುವ ಸಹಭಾಗಿತ್ವ(ಶಿರ್ಕ್) ಮಹಾ ಪಾಪವು ಅಲ್ಲಾಹನನ್ನು ತಿರಸ್ಕರಿಸುವುದೂ ಆಗಿರುತ್ತದೆ.

ಇಲ್ಲಿ ಪ್ರತ್ಯೇಖ ಗಮನದಲ್ಲಿರಬೇಕಾದ ತಿಳುವಳಿಕೆ ಅಂದರೆ ಸಹಭಾಗಿತ್ವಕ್ಕೆ(ಶಿರ್ಕ್‌ಗೆ) ಮುಟ್ಟುವಂತಹ ಮಾದ್ಯಮಗಳು ಅವು ಮುಟ್ಟುವಂತಹವುಗಳಿಂದಾಗಿದೆ. ದೀನಿನ ವಿಜ್ಞಾನದ ಮೌಲ್ಯ ಮತ್ತು ನಿಭಂದನೆಗಳು ಆವುಗಳಿಂದಾಗಿದೆ. ಅಲ್ಲದೆ ಬಹುತೇಕ ಬಹು ದೇವತಾ ಸಿಂದ್ಧಾಂತ

ಮಾಡಿಸುವಂತಹಾ ಯಾವೊಬ್ಬನಲ್ಲಿಯೂ ಚಿಕಿತ್ಸೆ ಪಡದು ಕೊಳ್ಳುವುದು ಅನುವದನೀಯವಲ್ಲ ಅದು ವಸೀಲತು ಶಿರ್ಕ್ ಆಗಿರುತ್ತದೆ. ಇನ್ನು ಅವನಲ್ಲಿ ಹೇ(ಕೇ)ಳದೇ ಸೇವಗಳನ್ನು ಮಾಡುವುದಾದರೆ ಆವಾಗ ಶೈತಾನಿನ ಅಪಾಯದಿಂದ ಅಲ್ಲಾಹನಲ್ಲಿ ಅಭಯ ಯಾಚಿಸಿರಿ. ಮಹಾ ಶೈತಾನರ ಉಪದ್ರವಗಳಿಂದ ಅಲ್ಲಾಹನಲ್ಲಿ ಅಭಯ ಯಾಚಿಸಿರಿ. ಕೆಲವೊಮ್ಮೆ ಅವುಗಳ ಮಾತುಗಳನ್ನು ಸ್ವೀಕರಿಸಿ ಮನುಷ್ಯನನ್ನು ವಶೀಕರಿಸಲು ಜಿನ್ನುಗಳ ಸೇವೆಯಿಂದ ಅವುಗಳ ವರ್ತಮಾನಗಳಿಂದ ಅವುಗಳನ್ನು ಮಾದ್ಯಮವಾಗಿರಿಸಿಕೊಂಡು ಅವುಗಳಿಗೆ ಗಮನ ಕೊಡಬೇಕಾಗಿರು ಬರುವಂತೆ ಮಾಡುವುದಾಗಿದೆ. ಅಲ್ಲಾಹನು ಹಾಗೆ ಅಗುವುದರಿಂದ ನಮ್ಮನ್ನು ರಕ್ಷಿಸಲಿ.[120]

ಅಶ್ಶೈಖ್ ಖಾಲಿದ್ ಬಿನ್ ಅಬ್ದುಲ್ಲಾ ಅಲ್ ಮುಸ್ಲಿಹ್.[121] ಅವರಲ್ಲಿ ಈ ವಿವರ ಕೇಳಿದಾಗ ಅವರು ಹೇಳುತ್ತಾರೆ:

**سئل الشيخ : خالد بن عبدالله المصلح :** يوجد أناس يدعون أنهم يعالجون الناس من الأمراض الروحية والكشف عليها من سحر ومس وعين ويستعينون في ذلك على زعمهم بجن مسلمين وهم يدعون أنهم لا يفعلون شركيات في تحضيرهم بل تعاون على الخير ويحتجون بكلام شيخ

---

(ಇಂತಹವುಗಳಿಗೇ ಮುಟ್ಟುತ್ತದೆ ಎನ್ನುವುದು) ಸೀಮಿತವಾಗಿಲ್ಲ. ಅಲ್ಲದೇ ಅದು ಅತ್ಯಂತ ವ್ಯಾಪಕವೂ ಮತ್ತು ಬಹಳ ಅಪಾಯಕಾರಿಯೂ ಆಗಿ ವ್ಯೆಕ್ತವಾಗಿದೆ. ಮುನ್ನೆಚ್ಚೆರಿಕೆ ಮತ್ತು ಇತ್ಯಾದಿಗಳಂತದರ ಮೇಲೆ ಪ್ರತ್ಯೇಕವಾಗಿ ಗಮನದಲ್ಲಿಡಬೇಕಾದ ವಿಶಯವಾಗಿವೆ (ವಸೀಲತುಶಿರ್ಕ್). ನಾವು ಇವುಗಳಂತ ಇತರ ಕಾರ್ಯಗಳಬಗ್ಗೆ ಎಚ್ಚರಿಕೆ ನೀಡುವೆವು.(ಅಲ್ ಮದ್ ಖಲ್ ಲಿ ದಿರಾಸತುಲ್ ಅಖೀದತುಲ್ ಇಸ್ಲಾಮೀಯ ಅಲಾ ಅಹ್ಲುಸುನ್ನಃ ವಲ್‌ಜಮಾಅ. ಪುಟ:–165 –ದಾ. ಇಬ್ರಾಹೀಮ್ ಬಿನ್ ಅಲ್ ಬುರೈಕಾನ್_ ಸದ್ಯಸರು: ಮುಅಲ್ಲಿಮೀನ್ ಕಾಲೇಜು ದಮ್ಮಾಮ್. ವಿಭಾಗ: ಇಸ್ಲಾಮಿಕ್ ಸ್ಟಡೀ.)

[120] ಅತ್ತಮ್‌ಹೀದ್ ಲಿ ಶರಹಿ ಕಿತಾಬಿ ತೌಹೀದ್–ಪುಟ:616

[121] ಖಾಲಿದ್ ಬಿನ್ ಅಬ್ದುಲ್ಲಾ ಬಿನ್ ಮುಹಮ್ಮದ್ ಅಲ್ ಮುಸ್ಲಿಹ್, (ಮುದರ್ರಿಸ್ ಕುಲ್ಲಿಯತು ಶರಯಿಯಃ ಯುನಿವರ್ಸಿಟಿ ಅಲ್ ಗಸೀಂ, ಸವೂದಿ ಅರಬೀಯ. ಅದ್ಯಕ್ಷರು: ಲಜ್ನತ ತಲಬುಲ್ ಇಲ್ಮ್ ಶೈಖ್ ಇಬ್ನ್ ಉಸೈಮೀನ್ ಯುನಿವರ್ಸಿಟಿ , ಸದಸ್ಯರು ಲಜ್ನತುಲ್ ಇಲ್ಮಿಯಃ ಇಅಲಾಮಿಯಃ ತೌಯೀಯತು ಫಿಲ್‌ಹಜ್, ಮತ್ತು ರಾಬಿತತುಲ್ ಆಲಮುಲ್ ಇಸ್ಲಾಮ್.

الإسلام ابن تيمية ويقولون: هذه مسألة خلافية بين علماء المسلمين ولكل رأيه وحرية اختياره بين الفتاوي . فماهو حكم هذا الاستخدام للجن وهل تعتبر مسألة خلافية كما يزعمون .

**الجواب :** بسم الله الرحمن الرحيم

**أولاً:** أما طلب المعونة من الجن ففيه خلاف بين أهل العلم والأحوط للعبد أن يتجنب ذلك، لأن هذا الفعل محدث، فإن السلف رحمهم الله من الصحابة ومن بعدهم لم ينقل عنهم أنهم استخدموا هذا الطريق ولا يصلح آخر هذه الأمة إلا بما صلح به أولها فهذا النبي صلى الله عليه وسلم تمر عليه أحلك الظروف وأصعب المواقف في أحد والأحزاب وغيرها ومع ذلك لم يعلق قلبه إلا بالله ولم يستعمل من الأسباب إلا ما كان في مقدور البشر. وقد استدل بعض أهل العلم على منع التعامل معهم بقوله تعالى: (هَلْ أُنَبِّئُكُمْ عَلَى مَنْ تَنَزَّلُ الشَّيَاطِينُ (221) تَنَزَّلُ عَلَى كُلِّ أَفَّاكٍ أَثِيمٍ):( 222) الشعراء. وبقوله تعالى: (وَيَوْمَ يَحْشُرُهُمْ جَمِيعاً يَا مَعْشَرَ الْجِنِّ قَدِ اسْتَكْثَرْتُمْ مِنَ الْأِنْسِ وَقَالَ أَوْلِيَاؤُهُمْ مِنَ الْإِنْسِ رَبَّنَا اسْتَمْتَعَ بَعْضُنَا بِبَعْضٍ ): 128) الأنعام "128" وبقوله: ( وَأَنَّهُ كَانَ رِجَالٌ مِنَ الْإِنْسِ يَعُوذُونَ بِرِجَالٍ مِنَ الْجِنِّ فَزَادُوهُمْ رَهَقاً ) (الجن: 6). ثم إن الغالب في الجن أنهم لا يخدمون الإنس إلا إذا تقربوا إليهم بأنواع من القربات المحرمة: كأن يذبح لهم، أو يكتب كلام الله تعالى بالنجاسات وغير ذلك .

ثانياً : لا أعلم طريقة بها يمكن تمييز صالح الجن من غيرهم لكن من المعلوم أن الحكم في هذه الدنيا على الجن والإنس إنما هو على الظاهر وأما البواطن فعلمها إلى الله إلا أنه يعكر على إعمال هذا الأصل في الجن كثرة الكذب والفساد فيهم والله أعلم.

**ಉತ್ತರ:** ಅಲ್ಲಾಹನ ನಾಮದೊಂದಿಗೆ ಅವನು ಕರುಣಾಮಯನೂ ದಯಾನಿಧಿಯೂ ಅಗಿರುವನು.

ಮೊದಲನೇಯದಾಗಿ. ಜಿನ್ನಿನೊಂದಿಗಿರುವ ಸಹಾಯ ಅಹ್ಲುಲ್ ಇಲ್ಮಿನ ವಕ್ತಾರರಲ್ಲಿ ಅಭಿಪ್ರಾಯ ವ್ಯೆತ್ಯಾಸಗಳಿರುವ ಸಂಗತಿ ಅದರಲ್ಲಿರು ವಿವೇಕತೆ ಅಂದರೆ ಅದರಿಂದ ದೂರವಾಗುವುದು. ಕಾರಣ ಈ ಸಂಗತಿ

ಹೊಸದಾಗಿರುವುದಾಗಿದೆ. ಸ್ವಹಾಬರಲ್ಲಿ ಅದರ ನಂತರವಿರುವ ಸಲಫುಸ್ವಾಲಿಹೀನ್ ಅಲ್ಲಾಹನು ಅವರ ಮೇಲೆ ಕರುಣೆದಯಪಾಲಿಸಲಿ, ರಿಂದ ಯಾವುದೇ ರೀತಿಯಲ್ಲಿ ಈರೀತಿಯಾಗಿ ಸೇವೆಗಳನ್ನು ಮಾಡಿದ ಬಗ್ಗೆ ನಕಲು ಮಾಡಿದ್ದಾಗಿ ಕಂಡು ಬರುವುದಿಲ್ಲ ಅಲ್ಲದೇ ಈ ಉಮ್ಮತ್ತಿಗೆ ಪ್ರವಾದಿ ಸ.ರವರ ಮಾಡಿತೋರಿಸಿರುವುದಲ್ಲದೇ ಬೇರೆ ಇತ್ಯಾದಿಗಳನ್ನು ಮಾಡುವುದು ಯೋಗ್ಯವಲ್ಲ. ಇಂತಹ ಸಂದಿಗ್ದ ಘಟ್ಟಗಳಲ್ಲಿ ಮತ್ತು ಇಂತಹ ಸನ್ನಿವೇಶಗಳು ಬಂದಾಗ ನಿನ್ನವರಿಗೆ ಪ್ರತ್ಯೇಖ ಈ ಕಾರ್ಯಗಳ ಗಾಂಭೀರ್ಯತೆಯನ್ನು ತಿಳಿಸಬೇಕಾಗಿದೆ. ಹಾಗೆಯೇ ಅಲ್ಲಾಹನಲ್ಲದೇ ಇತರರ ಮೇಲೆ ಮನಸ್ಸನ್ನು ಕೇಂದ್ರಿಕರಿಸಬಾರದು. ಮನುಷ್ಯನಿಗೆ ಸಾದ್ಯವಿರುವುದಲ್ಲದೆ ಬೇರೆತ್ಯಾದಿ ಕಾರಣಗಳನ್ನು ಮಾಡದೆ ಇರುವುದು. ಅಹ್ಲುಲ್ ಇಲ್ಮಿನ ವಕ್ತಾರರು ಜಿನ್ನಿನೊಂದಿಗೆ ಸಹಾಯ ಪಡಯದೇ ಇರಲು ಪುರಾವೆ ಯಾಗಿಸಿರುವುದು. ಸೂರತು ಆಶುಅರಾಅ ನ ಸೂಕ್ತಗಳು 'ಶೈತಾನನು ಯಾರ ಬಳಿ ಇಳಿದು ಬರುತ್ತಾನೆಂದು ನಾನು ನಿಮಗೆ ತಿಳಿಸಲೇ? ಸುಳ್ಳಾರೋಪ ಹೊರಿಸುವ ಪ್ರತೀಯೊಬ್ಬ ಪಾಪಿಯ ಬಳಿಗೆ ಅವರು ಇಳಿದು ಬರುತ್ತಾರೆ.[122] ಸೂರತು ಅನ್ ಆಂ ನಲ್ಲಿ ಅಲ್ಲಾಹನು ಹೇಳುತ್ತಾನೆ ಅವನು (ಅಲ್ಲಾಹು) ಅವರೆಲ್ಲರನ್ನೂ ಒಟ್ಟುಗೂಡಿಸುವ ದಿನ. (ಅವನು ಜಿನ್ನ್‌ಗಳೊಂದಿಗೆ ಹೇಳುವನು): 'ಓ ಜಿನ್ನ್ ಸಮೂಹವೇ! ಮನುಷ್ಯರ ಪೈಕಿ ಅನೇಕ ಜನರನ್ನು ನೀವು ದಾರಿಗೆಡಿಸಿರುವಿರಿ.'[123] ಮನುಷ್ಯರಲ್ಲಿ ಸೇರಿದ ಅವರ ಆಪ್ತಮಿತ್ರರು ಹೇಳುವರು: 'ನಮ್ಮ ಪ್ರಭೂ! ನಮ್ಮಲ್ಲಿ ಕೆಲವರು ಇತರ ಕೆಲವರಿಂದ

---

[122] ಅಶ್ಶುಅರಾಅ–221–222

[123] ಜಿನ್ನ್‌ಗಳಲ್ಲಿ ಸೇರಿದ ಸೈತಾನರು ನಾವು ತಿಳಿಯದ ರೀತಿಯಲ್ಲಿ ನಮ್ಮನ್ನು ದಾರಿಗೆಡಿಸಲು ಸದಾ ಪ್ರಯತ್ನಿಸುತ್ತಿರುವರೆಂದು ಕುರ್ಆನ್ ನಮಗೆ ಎಚ್ಚರಿಕೆ ನೀಡಿದೆ.

ಸುಖಾನುಭೂತಿಯನ್ನು ಪಡೆದಿರುವರು.[124] ತರುವಾಯ ನೀನು ನಮಗೆ ನಿಶ್ಚಯಿಸಿದ ಅವಧಿಯನ್ನು ನಾವು ತಲುಪಿರುವೆವು.' ಅವನು ಹೇಳುವನು: 'ನರಕಾಗ್ನಿಯೇ ನಿಮ್ಮ ವಾಸಸ್ಥಳ! ಅಲ್ಲಾಹು ಇಚ್ಛಿಸಿದ ವಿನಾ ನೀವದರಲ್ಲಿ ಶಾಶ್ವತವಾಗಿ ವಾಸಿಸುವಿರಿ.' ಖಂಡಿತವಾಗಿಯೂ ತಮ್ಮ ಪ್ರಭು ಯುಕ್ತಿಪೂರ್ಣನೂ ಸರ್ವಜ್ಞನೂ ಆಗಿರುವನು.[125] ಸೂರತು ಜಿನ್ನ್‌ನಲ್ಲಿ ಅಲ್ಲಾಹನು ಹೇಳುತ್ತಾನೆ: ." ಕೆಲವು ಮಾನವರು ಜಿನ್ನ್ ಗಳ ಆಶ್ರಯ ಪಡೆದುದರಿಂದ ಅವರ(ಜಿನ್ನ್ ಗಳ) ಸಮೂಹವು ಮತ್ತಷ್ಟು ಗರ್ವಗೊಂಡವು."[126] ನಿಷಿದ್ಧವಾದ ಕಾರ್ಯಗಳಿಂದ ಅವುಗಳನ್ನು ಸಮೀಪಿಸಿಯಲ್ಲದೇ ಅವುಗಳು ಮನುಷ್ಯನಿಗೆ ವಂಚಿಸಲಾರವು. ಅವುಗಳಿಗೆ ಬಲಿಯರ್ಪಿಸುವುದರಿಂದ ಅಥವಾ ಅಲ್ಲಾಹನ ನಾಮವನ್ನು ಅಶುದ್ಧತೆಯಲ್ಲಿ ಬರೆಯುವುದರಿಂದ ಇತ್ಯಾದಿಗಳು

ಎರಡನೇಯದಾಗಿ: ಜಿನ್ನುಗಳು ಸ್ವಾಲಿಹ್ ಅಥವಾ ಇತ್ಯಾದಿಗಳೆಂದು ತಿಳಿಯುವ ಮಾಪನ ನಮ್ಮಲಿಲ್ಲ ಆದರೆ ಈ ಲೋಕದಲ್ಲಿ ಜಿನ್ನ್ ಮತ್ತು ಮನುಷ್ಯನ ಬಗ್ಗೆ ಇರುವ ವಿವರ ವ್ಯಕ್ತವಾಗಿರುವುದರ ಮೇಲಾಗಿರುತ್ತದೆ. ಅಂತರ್ಯವಾಗಿರುವ ವಿವರ ಅಲ್ಲಾಹನಿಗಾಗಿದೆ ಮತ್ತು ಜಿನ್ನಿನ ಮೂಲ ಪ್ರವರ್ತಿಗಳ ಮೇಲಿರುವ ಮರೆ ಭೃಷ್ಟಾಚಾರ ಮತ್ತು ಅತಿಯಾದ ಸುಳ್ಳಿನ ಮೇಲೆ ಹೊಂದಿಕೊಂಡಿವೆ. ಅಲ್ಲಾಹನು ಹೆಚ್ಚು ಬಲ್ಲವನು.

---

[124] ಸೈತಾನರು ದುರ್ಬೋಧನೆ ಮಾಡುವುದು ತಾತ್ಕಾಲಿಕವಾದ ಸುಖಾನುಭೂತಿಯನ್ನು ತರುವಂತಹ ಮತ್ತು ಮುಂದೆ ಗುರುತರವಾದ ಶಿಕ್ಷೆಗೆ ಕಾರಣವಾಗುವಂತಹ ವಿಷಯಗಳನ್ನಾಗಿವೆ. ಅಂದರೆ ನರಕಾಗ್ನಿಯಲ್ಲಿ ಶಿಕ್ಷೆಅನುಭವಿಸುವುದರ ಬಗ್ಗೆ.

[125] ಸೂರತು ಅನ್ಆಂ ಸೂಕ್ತ–128

[126] ಸೂರತು ಜಿನ್ ಸೂಕ್ತ–6

ಡಾ॥ ಅಬ್ದುಲ್ಲಾ ಫಕೀಹ್[127] ಫತ್ವಾ ಸಂಖ್ಯೆ 7369 ಯಲ್ಲಿ ಕೇಳಿದ ಪ್ರಶ್ನೆಗೆ ಉತ್ತರೀಸುತ್ತಾ ಹೇಳುತ್ತಾರೆ

**مركز الفتوى بإشراف د.عبدالله الفقيه**:"فتوى رقم 7369":

ماحكم من يتعامل مع شخص يتعامل مع الجن في الخير فقط في علاج بعض الأمراض وفك السحر. ولايستخدم الجن إلا في عمل الخير وعرف عن هذا الشخص التقوى والورع . وهل هناك أشخاص يتمتعون بكرامات من الله عز وجل. وهل يكون تسخير الجن للشخص في عمل الخير كرامة له من عند الله سبحانه؟ أفيدونا جزاكم الله خيرا بأسرع وقت ممكن .

ಒಬ್ಬ ಜಿನ್ನಿನೊಂದಿಗೆ ಉತ್ತಮವಾದ ಕೆಲಸಗಳನ್ನೇ ಮಾಡುತ್ತಿರುವವನೊಂದಿಗೆ

ಕೆಲವು ರೋಗಗಳ ಶಮನಕ್ಕಾಗಿ ಮಾಟ(ಸಿಹರ್)ಗಳನ್ನು ನೀಗಿಸಲು ಅವರೊಂದಿಗೆ ವ್ಯವಹರಿಸುವುದರ ವಿಧಿಯೇನು? ಅವರು ಒಳಿತಿನ ಕಾರ್ಯಕ್ಕಲ್ಲದೇ ಜಿನ್ನನ್ನು ಉಪಯೋಗಿಸಿಕೊಳ್ಳುವುದಿಲ್ಲ ಮಾತ್ರವಲ್ಲ ಅವರು ದೈವಭಕ್ತಿ ಮತ್ತು ಧರ್ಮನಿಷ್ಠೆಯಲ್ಲಿ ಹೆಸುವಾಸಿಯಾದವರಾಗಿದ್ದಾರೆ. ಹೀಗಿರುವಂತ ಸಂದರ್ಭದಲ್ಲಿ ಅಲ್ಲಾಹನ ಕರಾಮಾತಿನಿಂದ ಅನುಭವ ಪಡೆಯುವವರು ಇದ್ದಾರೆಯೇ? ಮತ್ತು ಯಾರಾದರೊಬ್ಬರಿಗೆ ಜಿನ್ನ್ ಒಳಿತಿನ ಕಾರ್ಯಗಳನ್ನು ಮಾಡುವುದಕ್ಕಾಗಿ ಕರಾಮತ್ತಿನಿಂದ ಅಲ್ಲಾಹನ ವತಿಯಿಂದ ಅಧೀನಗೊಳ್ಳುವುದೆ?

**الحمد لله** والصلاة والسلام على رسول الله وعلى آله وصحبه أما بعد :

فإنه لا يجوز الاستعانة بالجن ولوكان في أمور يظهر أنها من أعمال الخير، لأن الاستعانة بهم تؤدي إلى مفاسد كثيرة، ولأنهم من الأمور الغيبية التي يصعب على الإنسان فيها الحكم عليهم بالإسلام، أو الكفر، أو الصلاح، أو النفاق، لأن الحكم بذلك يكون بناء على معرفة تامة

---

[127] ಅಬ್ದುಲ್ಲಾ ಬಿನ್ ಮುಹಮ್ಮದ್ ಬಿನ್ ಜಂಕೀ ಅಶಂಕೇತಿ. (ಜನನ: 1964 ಮೌರಿತಾನಿಯ.)

بخلقهم ودينهم والتزامهم وتقواهم، وهذا لا يمكن الاستيثاق منه لانعدام مقاييس تحديد الصادقين والكاذبين منهم بالنسبة إلينا.

ولم يثبت عن النبي صلى الله عليه وسلم، ولا خلفائه الراشدين، ولا الصحابة ولا التابعين، أنهم فعلوا ذلك، أو استعانوا بهم، أو لجؤوا إليهم في حاجاتهم.

ومع انتشار الجهل في عصرنا وقلة العلم قد يقع الإنسان في الشعوذة والسحر، بحجة الاستعانة بالجن في أعمال الخير، وقد يقع في مكرهم وخداعهم وهو لا يشعر، إلى ما في ذلك من فتنة لعامة الناس، مما قد يجعلهم ينحرفون وراء السحرة والمشعوذين بحجة الاستعانة بالجن في أعمال الخير.

وما ذكره شيخ الإسلام ابن تيمية في فتاويه من أن استخدامهم في المباح والخير جائز كاستخدام الإنس في ذلك، فإنه في آخر كلامه ذكر أن من لم يكن لديه علم تام بالشريعة قد يغتر بهم ويمكرون به.

ಉತ್ತರ:– ಸರ್ವಸ್ತುತಿಯೂ ಅಲ್ಲಾಹನಿಗಾಗಿದೆ, ಅವನ ಕರುಣೆಯೂ ರಕ್ಷೆಯೂ ಪ್ರವಾದಿ ಸ.ರವರ ಮೇಲೂ ಹಾಗು ಅವರ ಕುಟುಂಬಸ್ತರ ಮೇಲೂ ಅವರ ಅನುಯಾಯಿಗಳ ಮೇಲೂ ಸದಾ ವರ್ಶಿಸುತ್ತಲಿರಲಿ.

ಒಳಿತಿನ ಕಾರ್ಯಗಳನ್ನು ಮಾಡುವ ಹಾಗಿ ವ್ಯೆಕ್ತವಾದರೂ ಕಡ್ಡಾಯವಾಗಿ ಜಿನ್ನಿನೊಂದಿಗಿರುವ ಸಹಾಯ ಅನುವದನೀಯವಲ್ಲ ಕಾರಣ ಅದರೊಂದಿಗಿರುವ ಸಹಾಯಗಳೆಲ್ಲವೂ ಹೆಚ್ಚಾಗಿ ಭೃಷ್ಟಾಚಾರಕ್ಕೆ ಸೇರುವಂತಹದ್ದಾಗಿದೆ ಕಾರಣ ಇದು ಅಗೋಚರವಾದ ವಿಷಯಕ್ಕನುಗುಣವಾಗಿರುತ್ತದೆ ಮನುಷ್ಯನಿಗೆ ಕಷ್ಟವಾದದ್ದೂ ಅದರ ಮೇಲಿರುವ ವಿಧಿ ಇಸ್ಲಾಮಿನಿಂದಾಗಿದೆ. ಕುಫುರ್, ಅಥವಾ ಒಳ್ಳೆಯತನ, ಅಥವಾ ಕಪಟತನ ಆ ಸೃಷ್ಟಿಯ ಪರಿಪೂರ್ಣತೆಯನ್ನು, ದೀನನ್ನೂ , ಭಯಭಕ್ತಿಯನ್ನು, ಕಾರ್ಯಬದ್ದತೆಯನ್ನು ಮತ್ತು ಧರ್ಮನಿಷ್ಟೆಯನ್ನು ಅರಿವುವಾಗಲೇ ಅದರ ವಿಧಿ ತಿಳಿಯಲಾಗುವುದು. ನಮ್ಮ ಮಟ್ಟಿಗೆ ನೋಡುವುದಾದರೆ ಅವರು

ಸತ್ಯವಂತರೋ, ಸುಳ್ಳರೋ ಎಂದು ಮಾಪನ ಮಾಡುವಂತ ಯಾವುದೇ ಆಳತೆಗೋಲು ನಮ್ಮಲ್ಲಿಲ್ಲ.

ಮತ್ತು ಪ್ರವಾದಿ ಸ.ರವರಿಂದ ಸಾಬೀತಾಗಿ ಬಂದೂ ಇಲ್ಲ ಅಥವಾ ಖುಲಫಾವು ರ್‍ರಾಷಿದೀನ್ ರಿಂದಲೋ ಅಥವಾ ಸಹಾಬತ್ತರಿಂದಲೋ ಅಥವಾ ತಾಬಿಯೀನರಿಂದಲೋ ಮಾಡಿತೋರಿಸಲೂ ಇಲ್ಲ ಅಥವಾ ಅವರೊಂದಿಗೆ ಸಹಾಯ ಯಾಚಿಸಲೂ ಇಲ್ಲ ಅಗತ್ಯಗಳನ್ನು ಪೂರ್‍ಯಸುವುದೋ ಅವರೊಂದಿಗೆ ಆಶ್ರಯ ಪಡೆಯದೋ ಮಾಡಿಯೂ ಇಲ್ಲ.

ಅಜ್ಞಾನದಿಂದ ವಿಧ್ಯೆಯಕೊರೆತೆಯಿಂದ ಇಂದಿನ ಕಾಲದಲ್ಲಿ ಜನರು ಮಾಟ ಮಂತ್ರಗಳಲ್ಲಿ ಇಸ್ತಿಆನತು ಬಿಲ್ ಜಿನ್ನನ್ನು ಒಳಿತಿನ ಕಾರ್ಯಕ್ಕೆ ಮಾಡಬಹುದೆಮದು ಪುರಾವೆಗಳನ್ನು ತಂದಿರುವರು. ಕೆಲವೊಮ್ಮೆ ಅವರ ಕುತಂತ್ರಗಳಿಗೆ ವಂಚನೆಗಳಿಗೆ ಬಲಿಯಾಗಿರುತ್ತಾರೆ ಅವರಿಗೆ ತಿಳಿಯದೇ ಜನರ ಮದ್ಯೆ ಇದೊಂದು ಫಿತ್ನಕ್ಕೆ ಸೇರಿರುತ್ತದೆ. ಜಿನ್ನಿನೊಂದಿಗಿರುವ ಸಹಾಯ ಒಳಿತಿನ ಕಾರ್ಯಕ್ಕೆ ಪುರಾವೆಯಾಗಿಸಿ ಮಾಟ ಮಂತ್ರಗಳ ಮರೆಯಲ್ಲಿ ಕ್ರಮತಪ್ಪಿ ಮಾಡುತಿರುತ್ತಾರೆ.

ಶೈಖುಲ್ ಇಸ್ಲಾಮ್ ಇಬ್ನ್ ತೀಮೀಯಾ ಹೇಳಿರುವಂತಹ ವಿಷಯ ಮಜ್ಮೂಅ ಫತಾವದಲ್ಲಿ ಜಿನ್ನಿನೊಂದಿಗೆ ಉತ್ತಮವಾದ ಕಾರ್ಯಗಳಿಗಾಗಿ ಪವರ್ತಿಸುವುದು ಅನುವದನೀಯ ಎಂದು ಹೇಳಿದಲ್ಲಿ ಅವರು ಕೊನೆಯಾಗಿ ಹೇಳಿರುವುದೇನೆಂದರೆ ಯಾರಿಗೆ ಶರೀಅತ್ತಿನ ಪರಿಪೂರ್ಣವಾದ ವಿಧ್ಯೆಇಲ್ಲವೋ ಆವಾಗ ಅವನನ್ನು (ಜಿನ್ನುಗಳು) ಕುತಂತ್ರಗಳಿಂದ ಅವನನ್ನು ವಂಚಿಸುವವು.